# ಅಮೃತಮಂಥನ

( ಕಾದಂಬರಿ )



ಅ. ನ. ಕೃ





… ಪಬ್ಲಿಕೇಷನ್ಸ್
ಬೆಂಗಳೂರು

# ಮುನ್ನುಡಿ

'ಅಮೃತಮಂಥನ' ಪುರಾಣಕಥೆಯಲ್ಲ. ಹಿಂದಿನ ಯುಗವೊಂದರಲ್ಲಿ ದೈವಾಸುರರು ವಾಸುಕಿಯನ್ನೇ ಹಗ್ಗ ಮಾಡಿಕೊಂಡು, ಮಂಥರಪರ್ವತವನ್ನೇ ಕಡೆಗೋಲನ್ನಾಗಿ ಉಪಯೋಗಿಸಿಕೊಂಡು ಸಮುದ್ರವನ್ನು ಮಥಿಸಿದರೆಂದು ಪುರಾಣಗಳಲ್ಲಿ ನಿರೂಪಿತವಾಗಿದೆ. ಈ ಮಥನದಿಂದಾಗಿ ಗರಳ, ಅಮೃತ, ಲಕ್ಷ್ಮಿ ಹುಟ್ಟಿದರಂತೆ !

ಪುರಾಣದ ಈ ಕಥೆಗೆ ಸಾಂಕೇತಿಕ ಅರ್ಥವಿದೆ. ಅಮೃತಕ್ಕಾಗಿ ನಿತ್ಯ ಮಂಥನವಾಗುತ್ತಲೇ ಇದೆ. ಅಮೃತ ಹುಟ್ಟುವ ಮುನ್ನ ಗರಳ ಹುಟ್ಟುವುದು ಸ್ವಾಭಾವಿಕ. ಕೌಟುಂಬಿಕ, ಸಾಂಘಿಕ, ಸಾಮಾಜಿಕ, ರಾಷ್ಟ್ರೀಯ ಜೀವನದಲ್ಲಿ ನಾವು ಈ ನಿತ್ಯನೂತನ ಸತ್ಯವನ್ನು ಕಾಣುತ್ತಿದ್ದೇವೆ.

'ಅಮೃತಮಂಥನ' ಕಾದಂಬರಿಯನ್ನು ಈ ತತ್ತ್ವದ ಆಧಾರದ ಮೇಲೆ ಕಟ್ಟಿದ್ದೇನೆ. ಇದರಲ್ಲಿ ನಾಲ್ಕು ಸಂಸಾರಗಳ ಕಥೆ ಹಾಸುಹೊಕ್ಕಾಗಿ ಹೊಂದಿಕೊಂಡಿದೆ. ತನ್ನ ಸಂಸಾರದ ಅಭ್ಯುದಯಕ್ಕೆ ಆತ್ಮಾರ್ಪಣಭಾವದಿಂದ ದುಡಿಯುವ ಕಮಲಾಕ್ಷಮ್ಮ; ಪರರ ಏಳಿಗೆಗಾಗಿ ತನ್ನ ಜನ್ಮವನ್ನೇ ನಿವೇದಿಸುವ ನಾಗೂಬಾಯಿ ಅಮರಮಾತೃತ್ವದ ಅಶ್ವಿನಿ ದೇವತೆಗಳಂತಿದ್ದಾರೆ. ದರ್ಪ ದಬ್ಬಾಳಿಕೆಗಳೇ 'ಅತ್ತೆತನ'ದ ಲಾಂಛನವೆಂದು ಭಾವಿಸುವ ಅಚ್ಚಮ್ಮ; ಅತ್ತೆಯೆಂದರೆ ಪರರ ಮಕ್ಕಳ ತಾಯಿ ಎಂದು ಭಾವಿಸುವ ಕಮಲಾಕ್ಷಮ್ಮ; ಐಶ್ವರ್ಯವೇ ಜೀವನದ ಸರ್ವಸ್ವ ಎಂದು ಭಾವಿಸುವ ಶಾರದಾ; ಅಂತಃಕರಣವೇ ಮಹದೈಶ್ವರ್ಯ ಎಂದು ಭಾವಿಸುವ ರತ್ನಾ; ಸ್ಥಾನಕ್ಕೆ ಹಂಬಲಿಸುವ

ಸುಬ್ಬುಕೃಷ್ಣ; ಋಜುಜೀವನದ ಅಂತರಾರ್ಥವನ್ನರಸುವ ರಾಮು ಈ ಕಾದಂಬರಿ ಯಲ್ಲಿ ಕಾಣಿಸಿಕೊಳ್ಳುವ ಕೆಲವು ಪಾತ್ರಗಳು.

ವಿಶಾಲವೇಶ್ಮದ ಮೇಲೆ ಹರಹಲ್ಪಟ್ಟಿರುವ ಈ ಕಾದಂಬರಿಯಲ್ಲಿ ಸುಖ, ದುಃಖ, ತ್ಯಾಗ, ಭೋಗ, ಸ್ನೇಹ, ಸೌಹಾರ್ದಗಳ ಒಳ–ಹೊರಗನ್ನು ಚಿತ್ರಿಸಲು ನಾನು ಯತ್ನಿಸಿದ್ದೇನೆ.

ಸಾಮಾನ್ಯರ ಜೀವನದಲ್ಲಿ ಹುದುಗಿರುವ ದೈವಿಕಗುಣಗಳನ್ನು ನಿರೂಪಿಸ ಬೇಕೆನ್ನುವ ನನ್ನ ಉದ್ದೇಶ '**ಅಮೃತಮಂಥನ**'ದಲ್ಲಿ ಅಭಿವ್ಯಕ್ತವಾಗಿದೆ. ಈ ಪ್ರಯತ್ನದಲ್ಲಿ ನಾನೆಷ್ಟು ಕೃತಕೃತ್ಯನಾಗಿರುವೆನೆನ್ನುವುದನ್ನು ನಿರ್ಧರಿಸುವುದು ಓದುಗರ ಕರ್ತವ್ಯಭಾಗ.

ದಕ್ಷ ವ್ಯವಹಾರಿಗಳೂ, ಉತ್ಸಾಹಿ ಪ್ರಕಾಶಕರೂ ಆದ ಗೀತಾ ಪಬ್ಲಿಕೇಷನ್ಸ್ ಮಾಲಿಕರಾದ ಶ್ರೀ ರಾಮಚಂದ್ರಯ್ಯನವರು, ಈ ಕೃತಿಯನ್ನು ಪ್ರಕಟಿಸಿದುದಕ್ಕೆ ನನ್ನ ನೆನಕೆ ಸಲ್ಲಿಸುತ್ತೇನೆ.

'ಇಂಡಿಯಾ ಪ್ರೆಸ್' ಮಾಲಿಕರು ಮುದ್ರಣವನ್ನು ಅಚ್ಚುಕಟ್ಟಾಗಿ ನೆರವೇರಿಸಿರುವುದಕ್ಕೆ ಅವರಿಗೂ ನನ್ನ ಕೃತಜ್ಞತೆ ಸಲ್ಲುತ್ತದೆ.

೧೭–೪–೬೧ ಅ. ನ. ಕೃ.

# ೧

ಪೌರಾಣಿಕರತ್ನ, ಪ್ರತಿವಾದಿಭಯಂಕರ, ವಿದ್ಯಾಮಹೋದಧಿ, ಪುರಾಣ ವಿಮರ್ಶನ ವಿಚಕ್ಷಣ ಐರಣಿ ಕೃಷ್ಣಾಚಾರ್ಯರ ಪುರಾಣ ಗೋಪಾಲಕೃಷ್ಣ ಸ್ವಾಮಿಯ ದೇವಸ್ಥಾನದಲ್ಲಿ ಒಂದು ತಿಂಗಳಿಂದ ಸಾಗಿತ್ತು.

ಪುರಾಣಶ್ರವಣಕ್ಕೆ ಹೋಗಲು ಪದ್ಮನಾಭರಾಯರು ಹಂಬಲಿಸುತ್ತಿದ್ದರು. ಯೋಗಾನರಸಿಂಹಯ್ಯನವರು ಅದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಪುರಾಣ ಹರಿಕಥೆಗಳನ್ನು ಕಂಡರೆ ಪದ್ಮನಾಭರಾಯರಿಗೆ ಎಷ್ಟು ಆಸ್ಥೆಯಿತ್ತೋ ಅಷ್ಟು ಯೋಗಾನರಸಿಂಹಯ್ಯನವರಿಗೆ ಬೇಸರ.

ಬಾಲ್ಯಸ್ನೇಹಿತರಾಗಿದ್ದ ಇಬ್ಬರಲ್ಲಿಯೂ ಗಾಢವಾದ ಸ್ನೇಹ, ವಿಶ್ವಾಸ ಬೆಳೆದಿತ್ತು. ಇಬ್ಬರೂ ಸರ್ಕಾರಿ ನೌಕರಿಗಾಗಿ ಜೀವ ಸವೆಸಿ ನಿವೃತ್ತ ರಾಗಿದ್ದರು.

ರೆವಿನ್ಯು ಗುಮಾಸ್ತರಾಗಿ ಕೆಲಸಕ್ಕೆ ಸೇರಿದ ಯೋಗಾನರಸಿಂಹಯ್ಯ ಅಮಲ್ದಾರ್ ಪದವಿಗೇರಿ ನಿವೃತ್ತರಾಗಿದ್ದರು. ಅದಕ್ಕೂ ಹೆಚ್ಚಿನ ಸ್ಥಾನ ಅವರಿಗೆ ತಪ್ಪಿಹೋದುದಕ್ಕೆ ಅವರ ಋಜುಸ್ವಭಾವವೇ ಮೂಲಕಾರಣವಾಗಿತ್ತು. ದೊಡ್ಡವರ ಮನೆಯ ಬಾಗಿಲು ಕಾಯುವುದು, ಅವರನ್ನು ಮುಖಸ್ತುತಿ ಮಾಡು ವುದು ಯೋಗಾನರಸಿಂಹಯ್ಯನವರ ಸ್ವಭಾವಕ್ಕೆ ಹೊರಗಾಗಿತ್ತು. ಮಾತು ಕಡ್ಡಿ ಮುರಿದಂತೆ ಖಂಡತುಂಡ. ಇದರಿಂದ ಅಧಿಕಾರಾವಧಿಯಲ್ಲಿ ಅವರು ಕೀರ್ತಿ ಗಳಿಸಲಾಯಿತೇ ವಿನಾ ಹಣ ಗಳಿಸಲಾಗಲಿಲ್ಲ.

ಯೋಗಾನರಸಿಂಹಯ್ಯನವರ ಸ್ವಭಾವಕ್ಕೆ ತದ್ವಿರುದ್ಧವಾದುದು ಪದ್ಮ ನಾಭರಾಯರ ಸ್ವಭಾವ. ಬಹು ದಾಕ್ಷಿಣ್ಯಪ್ರಕೃತಿ. ತಮಗೆ ಹಿಂಸೆಯಾದರೂ ಚಿಂತೆಯಿಲ್ಲ, ಇನ್ನೊಬ್ಬರ ಮನಸ್ಸು ನೋಯಿಸಬಾರದೆನ್ನುವ ಕೋಮಲಾಂತಃ

ಕರಣ. ಶಿಕ್ಷಣಖಾತೆಯಲ್ಲಿ ಸಣ್ಣ ನೌಕರರಾಗಿ ಸೇರಿದ್ದ ಪದ್ಮನಾಭರಾಯರು ಸೂಪರಿಂಟೆಂಡೆಂಟ್ ಆಗಿ ರಿಟೈರಾಗಿದ್ದರು.

ಅವರ ಸ್ನೇಹಕ್ಕೆ ಬಲವಾದ ಬೆಸುಗೆ ಹಾಕಿದ್ದುದು ಈ ವಿಭಿನ್ನ ಮನೋಭಾವ. ಆದರೂ ಒಬ್ಬರನ್ನೊಬ್ಬರು ಅಗಲುತ್ತಿರಲಿಲ್ಲ.

ಪದ್ಮನಾಭರಾಯರಿಗೆ ಪುರಾಣಗಳೆಂದರೆ ಪಂಚಪ್ರಾಣ; ಯೋಗಾನರಸಿಂಹಯ್ಯನವರಿಗೆ 'ಹಿಂದೂ' ಪತ್ರಿಕೆಯೇ ಸಕಲ ಜ್ಞಾನಭಂಡಾರ.

ರಾಯರು 'ಪುರಾಣ'ವೆಂದರೆ ಯೋಗಾನರಸಿಂಹಯ್ಯನವರು,

"ಬಿಡೋ—ಏನು ಆ ಗೊಳ್ಳು ಕಥೆಗಳನ್ನು ಕೇಳುವುದು"

ಎಂದು ಮೂದಲಿಸಿಬಿಡುತ್ತಿದ್ದರು.

ಪ್ರತಿದಿನ ಸಂಜೆ ಇಬ್ಬರೂ ಮೂರು ನಾಲ್ಕು ಗಂಟೆಗಳನ್ನಾದರೂ ಜತೆಯಲ್ಲಿ ಕಳೆಯಲೇಬೇಕು. ರಾಯರು ಶಂಕರಪುರಕ್ಕೆ ಹೋಗಿ ಯೋಗಾನರಸಿಂಹಯ್ಯನವರನ್ನು ಜತೆಯಲ್ಲಿ ಕರೆದೊಯ್ಯುತ್ತಿದ್ದರು. ಒಂದೊಂದು ದಿನ ಯೋಗಾನರಸಿಂಹಯ್ಯನವರೇ ಚಾಮರಾಜಪೇಟೆಗೆ ಬಂದು ರಾಯರನ್ನು ಜತೆಯಲ್ಲಿ ಕರೆದೊಯ್ಯುತ್ತಿದ್ದರು.

ಐರಣಿ ಕೃಷ್ಣಾಚಾರ್ಯರು ಬೆಂಗಳೂರಿಗೆ ಬಂದು ಪುರಾಣ ಆರಂಭಿಸಿ ಒಂದು ತಿಂಗಳಾಗಿದ್ದರೂ ರಾಯರು ಶ್ರವಣಕ್ಕೆ ಹೋಗಲಾಗಿರಲಿಲ್ಲ.

ಆಚಾರ್ಯರ ಪುರಾಣವನ್ನು ಒಂದು ದಿನವಾದರೂ ಕೇಳಲೇಬೇಕೆಂದು ನಿರ್ಧರಿಸಿದ ಪದ್ಮನಾಭರಾಯರು ಒಂದು ಸಂಜೆ ಯೋಗಾನರಸಿಂಹಯ್ಯನವರ ಮನೆಗೆ ಬಂದರು.

ನರಸಿಂಹಯ್ಯನವರ ಧರ್ಮಪತ್ನಿ ಕಮಲಾಕ್ಷಮ್ಮನವರು ರಾಯರನ್ನು ಸ್ವಾಗತಿಸುತ್ತಾ,

"ಬನ್ನಿ—ಕುಳಿತುಕೊಳ್ಳಿ" ಎಂದರು.

"ಏನುಮಾಡುತ್ತಿದ್ದಾನಮ್ಮಾ ಯೋಗಾ?"

"ಮುಖ ತೊಳಿಯುತ್ತಿದ್ದಾರೆ."

"ಅಮ್ಮ, ಕಮಲಾಕ್ಷಮ್ಮನವರೇ, ನಿಮ್ಮಿಂದ ನನಗೆ ಒಂದು ಕೆಲಸವಾಗಬೇಕಲ್ಲ!"

" ಹೇಳಿ—ಅದಕ್ಕೇಕೆ ಸಂಕೋಚ ? "

" ಯೋಗನ ವಿಷಯ ನಿಮಗೆ ಗೊತ್ತೇ ಇದೆ. ಅವನು ಶುದ್ಧ ಬೆಂಕಿ ನವಾಬ. ಪುರಾಣ, ಪುಣ್ಯಕಥೆ ಎಂದರೆ ಅವನ ಮೈಮೇಲೆ ಮುಳ್ಳುಗಳೇಳುತ್ತವೆ. ಐರಣಿ ಕೃಷ್ಣಾಚಾರ್ಯರು ಈಗ ಒಂದು ತಿಂಗಳಿಂದ ಗೋಪಾಲಕೃಷ್ಣಸ್ವಾಮಿ ದೇವಸ್ಥಾನದಲ್ಲಿ ಪುರಾಣ ಹೇಳುತ್ತಿದ್ದಾರೆ. ಒಂದು ದಿನವಾದರೂ ಹೋಗೋಣಾಂದ್ರೆ ಯೋಗ ಅವಕಾಶ ಕೊಡುತ್ತಿಲ್ಲ."

" ಕೃಷ್ಣಾಚಾರ್ಯರು ಯಾರು ಪದ್ಮನಾಭರಾಯರೇ ? "

" ಅವರು ಧಾರವಾಡದ ಕಡೆಯವರು. ಘನ ವಿದ್ವಾಂಸರು. ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ದ್ವೈತದರ್ಶನದ ಪ್ರತಿಪಾದನೆಯಲ್ಲಿ ಎತ್ತಿದ ಕೈ. ನೀವು ಯೋಗನಿಗೆ ಒಂದು ಮಾತು ಹೇಳಿದರೆ ಇವತ್ತಾದರೂ ನಾನು ಪುರಾಣ ಕೇಳಬಹುದು."

ಕಮಲಾಕ್ಷಮ್ಮ ನಗುತ್ತಾ,

" ನಿಮ್ಮ ಸ್ನೇಹಿತರು ನಿಮ್ಮ ಮಾತೇ ಕೇಳದಿದ್ದರೆ ನನ್ನ ಮಾತು ಕೇಳುತ್ತಾರೆಯೇ ರಾಯರೇ ? " ಎಂದರು.

" ಮಿತ್ರಸಮ್ಮಿತಿಗಿಂತಲೂ ಕಾಂತಾಸಮ್ಮಿತಿ ಪ್ರಬಲವಾದುದಲ್ಲವೇನ್ರಮ್ಮಾ."

ಟವಲಿನಿಂದ ಮುಖ ಒರಸಿಕೊಳ್ಳುತ್ತಾ ಹೊರಗೆ ಬಂದ ಯೋಗಾ ನರಸಿಂಹಯ್ಯನವರು,

" ಯಾವಾಗ ಬಂದೆ ನಾಭಾ " ಎಂದರು.

" ಈಗ ತಾನೆ ಬಂದೆ ಕಣಯ್ಯ."

" ಬಟ್ಟೆ ಹಾಕಿಕೊಂಡು ಬಂದುಬಿಡುತ್ತೇನೆ "

ಎಂದು ಒಳಗೆ ಹೋಗಿ ಕುತ್ತಿಗೆ ಮುಚ್ಚುವ ಅಂಗಿ, ರುಮಾಲು ಧರಿಸಿ, ಕೈಯಲ್ಲಿ ಬೆತ್ತ ಹಿಡಿದು ಹೊರಗೆ ಬಂದರು.

" ನೀವು ಬರುವುದು ಹೊತ್ತಾಗುತ್ತದೆಯೇ ? "

ಎಂದು ಕಮಲಾಕ್ಷಮ್ಮನವರು ಯಜಮಾನರನ್ನು ಕೇಳಿದರು—

" ಏಕೆ ? "

" ನಾಗೂಬಾಯಿಯವರ ಜತೆ ರಾಯರ ಗುಡಿಗೆ ಹೋಗಿಬರುತ್ತೇನೆ."

" ಹೋಗಿ ಬಾ. ನಾವೂ ಲಾಲ್‌ಬಾಗ್‌ವರೆಗೆ ಹೋಗಿಬರುತ್ತೇವೆ."

" ಪುರಾಣಕ್ಕೆ ಹೋಗುತ್ತೇವೆ ಎಂದು ರಾಯರು ಹೇಳಿದರು."

" ಪುರಾಣ—ಯಾವ ಪುರಾಣವಯ್ಯ ! "

" ಐರಣಿ ಕೃಷ್ಣಾಚಾರ್ಯರದು."

" ನಾನು ಬರುತ್ತೇನೆಂದು ಹೇಳಿದ್ದೆನೇ ? "

" ಒಂದು ದಿನ ಬಾ—ಪುರಾಣ ಕೇಳಿದರೆ ನಿನಗೇನೂ ಪಾಪ ಸುತ್ತಿಕೊಳ್ಳುವುದಿಲ್ಲ."

ಕಮಲಾಕ್ಷಮ್ಮನವರು ಮಧ್ಯೆ ಬಾಯಿ ಹಾಕಿ,

" ಹೋಗಿಬನ್ನಿ. ರಾಯರು—ಪಾಪ—ಎಷ್ಟು ದಿನಗಳಿಂದ ಹೇಳುತ್ತಾ ಇದ್ದಾರೆ."

" ಹೂ—ಹೂ ! ನೀವಿಬ್ಬರೂ ಸೇರಿ ನನ್ನ ಮೇಲೆ ಪಿತೂರಿ ಹೂಡಿರುವಿರೋ ? "

" ದೊಡ್ಡ ರಾಜಕಾರಣ—ನಾವು ಪಿತೂರಿ ಮಾಡದಿದ್ದರೆ ಹೇಗಾಗುತ್ತದೆ ಹೇಳು."

" ನಿಮ್ಮ ಕುಸಿಬಿಸ್ಟಿ ಸಾಕು—ಹೋಗಿಬನ್ನೀಂದ್ರೆ "

ಎಂದು ಕಮಲಾಕ್ಷಮ್ಮ ಒತ್ತಾಯಪಡಿಸಿದರು.

" ಹೂ—ನಡೆಯಪ್ಪಾ ಹೋಗೋಣ. ಇವಳ ಮಾತು ಕೇಳದಿದ್ದರೆ ರಾತ್ರಿ ಊಟಕ್ಕೆ ಸೊನ್ನೆ ಸುತ್ತಿಬಿಡುತ್ತಾಳೆ."

" ಕೇಳಿದಿರಾ ರಾಯರೇ—ನಿಮ್ಮ ಸ್ನೇಹಿತರ ಮಾತನ್ನು ! "

ಎಂದು ಕಮಲಾಕ್ಷಮ್ಮ ನಕ್ಕರು.

ಇಬ್ಬರೂ ಮಾತಾಡಿಕೊಂಡು ಮೆಲ್ಲನೆ ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನ ಮುಟ್ಟಿದರು.

ಆಚಾರ್ಯರ ಖ್ಯಾತಿ ಬಹಳ ಜನಗಳನ್ನಾಕರ್ಷಿಸಿತ್ತು. ದೇವಸ್ಥಾನದ ಮುಖಮಂಟಪ ಜನಗಳಿಂದ ಕಿಕ್ಕಿರಿದು ತುಂಬಿತ್ತು.

ಆಚಾರ್ಯರು ಪ್ರಾರ್ಥನಾಶ್ಲೋಕಗಳನ್ನು ಹಾಡಿ

" ಈ ದಿನದ ಪುರಾಣದ ವಿಷಯ 'ಅಮೃತಮಂಥನ'ದ ಕಥೆ. ಶ್ರೀ ವೇದ ವ್ಯಾಸೋಕ್ತ ' ಮಹಾಭಾರತ 'ದಲ್ಲಿ ಈ ಪ್ರಸಂಗ ನಿರೂಪಿತವಾಗಿದೆ.

ಒಂದು ಕಾಲದಲ್ಲಿ ರಾಕ್ಷಸರ ಹಾವಳಿ ವಿಪರೀತವಾಗಿ, ದೇವಾದಿ ದೇವತೆಗಳ ಬಾಳು ದುಸ್ಸಹವಾಗುತ್ತ ಬಂದಿತು. ದೇವಾಸುರರಿಗೆ ಕಾಳಗ ಸಮನಿಸಿ, ದೇವತೆಗಳು ಪರಾಜಯಗೊಂಡರು. ದೆಸೆಗೆಟ್ಟ ದೇವತೆಗಳು ವೈಕುಂಠಕ್ಕೆ ಹೋಗಿ ವಿಷ್ಣುವಿನಲ್ಲಿ ಮೊರೆಯಿಟ್ಟರು.

' ಹೇ ಭಗವನ್, ನೀಚದೈತ್ಯರು ನಮ್ಮನ್ನು ನಾಮಾವಶೇಷಗೊಳಿಸಿ ದ್ದಾರೆ. ನೀನು ನಮ್ಮ ಮೇಲೆ ಕನಿಕರವಿಟ್ಟು ನಮ್ಮನ್ನು ರಕ್ಷಿಸಬೇಕು '

ಎಂದು ಪ್ರಾರ್ಥಿಸಲು ಆಶ್ರಿತಜನರಕ್ಷಕನಾದ ವಿಷ್ಣು,

' ದೇವತೆಗಳಿರಾ, ನಾನು ಹೇಳುವಂತೆ ಮಾಡಿ. ನೀವು ಮತ್ತೆ ಬಲ ಯುತರಾಗಿ ರಾಕ್ಷಸರನ್ನು ದಮನಿಸುವ ಶಕ್ತಿಯನ್ನು ಗಳಿಸುವಿರಿ. ಈಗ ರಾಕ್ಷಸರೊಂದಿಗೆ ಸಂಧಿ ಮಾಡಿಕೊಂಡು, ಜಗತ್ತಿನಲ್ಲಿ ದೊರೆಯುವ ಎಲ್ಲ ಗಿಡಮೂಲಿಕೆಗಳನ್ನು ಸಂಗ್ರಹಿಸಿ ಅಮೃತಸರೋವರದಲ್ಲಿ ಹಾಕಿ, ಮಂಥರ ಪರ್ವತವನ್ನೇ ಕಡೆಗೋಲು ಮಾಡಿಕೊಂಡು, ವಾಸುಕಿಯನ್ನೇ ಹಗ್ಗವನ್ನಾಗಿ ಉಪಯೋಗಿಸಿಕೊಂಡು ಸಮುದ್ರವನ್ನು ಮಥಿಸಿದರೆ ಅಪ್ರತಿಮಶಕ್ತಿಯನ್ನೂ, ಅಮರತ್ತ್ವವನ್ನೂ ಕೊಡಬಲ್ಲ ಪಾನೀಯ ಸಿದ್ಧವಾಗುತ್ತದೆ. ಮುಂದಿನ ವಿಷಯ ನನಗೆ ಬಿಡಿ. ನಿಮ್ಮ ಪರಮಶತ್ರುಗಳಾದ ದೈತ್ಯರಿಗೆ ಈ ಪಾನೀಯ ದೊರೆಯ ದಂತೆ ನಾನು ಮಾಡುತ್ತೇನೆ '

ಎಂದು ಆಜ್ಞಾಪಿಸಿದ.

ಭಗವಂತನ ಸೂಚನೆಯಂತೆ ದೇವತೆಗಳು ರಾಕ್ಷಸರೊಂದಿಗೆ ಸಂಧಿ ಮಾಡಿಕೊಂಡು, ಬಗೆಬಗೆಯ ಗಿಡಮೂಲಿಕೆಗಳನ್ನು ಸಂಗ್ರಹಿಸಿ, ಅಮೃತ ಸರೋವರಕ್ಕೆ ಹಾಕಿ ಮಂಥರಪರ್ವತವನ್ನೇ ಕಡೆಗೋಲು ಮಾಡಿಕೊಂಡು, ವಾಸುಕಿಯನ್ನೇ ಹಗ್ಗವನ್ನಾಗಿ ಉಪಯೋಗಿಸಿಕೊಂಡು ಸಮುದ್ರಮಂಥನ ಆರಂಭಿಸಿದರು. ಹರಿಯೇ ಕೂರ್ಮಾವತಾರ ತಾಳಿ ತಿರುಗಣೆಗೂಟವಾದ. ಈ ಮಂಥನದಿಂದ ಮೊದಲು ಸುರಧೇನು ಸುರಭಿ ಜನ್ಮತಳೆಯಿತು. ತರುವಾಯ ಸುರೇಶ್ವರ ವಾರುಣಿ ಹುಟ್ಟಿದ. ಅವನಾನಂತರ ದೇವಪುಷ್ಪ ಪಾರಿಜಾತವೂ ಅಪ್ಸರೆಯರೂ ಜನಿಸಿದರು. ಮಂಥನ ಮುಂದುವರೆಯಲು ಶಶಾಂಕ ಜನಿಸಿದ.

ಅವನನ್ನು ಮಹಾದೇವ ತನಗಾಗಿ ಇಟ್ಟುಕೊಂಡ. ದಿವ್ಯವಸ್ತುಗಳು ಬರುತ್ತಿದ್ದಂತೆ ಒಮ್ಮೆಲೇ ಲೋಕವನ್ನೇ ದಹಿಸಿಬಿಡುವಂಥ ಗರಳ ಹುಟ್ಟಿತು. ಇದನ್ನು ನಾಗದೇವತೆಗಳು ಸ್ವೀಕರಿಸಿದರು. ತರುವಾಯ ಕಮಲಾಸನಾಸೀನೆಯಾದ ಸೌಂದರ್ಯದಧಿದೇವಿ ಶ್ರೀ ಹುಟ್ಟಿದಳು. ಅವಳೊಂದಿಗೆ ಶ್ವೇತವಸನಧಾರಿಯಾದ ದೇವವೈದ್ಯ ಧನ್ವಂತರಿ, ಕೈಯಲ್ಲಿ ಅಮೃತಕಳಶ ಹಿಡಿದು ಹುಟ್ಟಿದ. ಆ ಕಳಶವನ್ನು ಕಂಡ ದೈತ್ಯರು ಅದನ್ನು ಕಸುಗೊಂಡು ಓಡಿಹೋದರು. ಹರಿ ಉಪಾಯಾಂತರದಿಂದ ಅದನ್ನು ಅಸುರರಿಂದ ಪಡೆದು ದೇವತೆಗಳಿಗಿತ್ತ. ಅಮೃತಪಾನಮಾಡಿದ ದೇವತೆಗಳು ಅಸುರರನ್ನು ಸದೆ ಬಡಿದು ವಿಶ್ವದಲ್ಲಿ ಶಾಂತಿಯನ್ನು ಸ್ಥಾಪಿಸಿದರು.

ಈ ದೈವಾಸುರ ಕಾಳಗ ಎಂದೋ ಆಗಿಹೋದ ಕಥೆಯಲ್ಲ. ನಿತ್ಯವೂ ನಮ್ಮ ಮನಸ, ಮನೆ, ಸಮಾಜ, ದೇಶದಲ್ಲಿ ಈ ಬಗೆಯ ಕಾಳಗ ನಡೆಯುತ್ತಲೇ ಇರುತ್ತದೆ. ಒಮ್ಮೊಮ್ಮೆ ಸತ್ತ್ವ, ತಮೋಶಕ್ತಿಯ ಆಘಾತಕ್ಕೆ ಸಿಕ್ಕಿ ಸೋಲನ್ನೊಪ್ಪಿಕೊಳ್ಳಬೇಕಾಗುತ್ತದೆ. ಸತ್ತ್ವಕ್ಕೆ ಜಯ ದೊರೆಯುವುದು ಶ್ರೀಹರಿಯ ಕೃಪೆಯಿಂದ ಎಂದು ಶ್ರೀ ವೇದವ್ಯಾಸ ಮಹರ್ಷಿಗಳು ತಿಳಿಸಿದ್ದಾರೆ.

ದೈವಾಸುರ ಶಕ್ತಿಗಳ ಮಥನವಾದಾಗ ಮಾರಕ ಗರಳವೂ ಹುಟ್ಟುತ್ತದೆ ; ತಾರಕ ಅಮೃತವೂ ಹುಟ್ಟುತ್ತದೆ. ಎರಡನ್ನೂ ಮನುಷ್ಯ ಜೀರ್ಣಿಸಿಕೊಳ್ಳಲು ಸಮರ್ಥನಾಗಬೇಕು '

ಎಂದು ಗ್ರಂಥ ಮುಚ್ಚಿ ಕಣ್ಣಿಗೊತ್ತಿಕೊಂಡು,

" ಇನ್ನು ಮಹಾಮಂಗಳಾರತಿ ಆಗಬಹುದು " ಎಂದರು.

ಯೋಗಾನರಸಿಂಹಯ್ಯನವರು ಮೆಲ್ಲನೆದ್ದರು.

ಪದ್ಮನಾಭರಾಯರು ಅವರನ್ನು ಹಿಂಬಾಲಿಸಿದರು.

ದೇವಸ್ಥಾನಕ್ಕೆ ಸಮೀಪದಲ್ಲಿಯೇ ರಾಯರ ಮನೆಯಿದ್ದುದರಿಂದ, ಯೋಗಾನರಸಿಂಹಯ್ಯನವರು,

" ನಿನ್ನ ಮನೆಯಲ್ಲಿ ಬಿಟ್ಟು ನಾನು ಹೋಗುತ್ತೇನೆ ನಾಭಾ " ಎಂದರು.

ಇಬ್ಬರೂ ಮೌನದಿಂದಲೇ ಸ್ವಲ್ಪ ದೂರ ಹೋದ ಮೇಲೆ ಯೋಗಾನರಸಿಂಹಯ್ಯನವರು,

"ನಿನ್ನ ಆಚಾರ್ರು ಪರವಾಗಿಲ್ಲ ಕಣಯ್ಯಾ, ಕಥೆಯನ್ನು ಚೆನ್ನಾಗಿ ಹೇಳುವುದಲ್ಲದೆ, ಹೊಸ ಅರ್ಥವನ್ನೂ ಕಲ್ಪಿಸುತ್ತಾರೆ. ಮನೆ, ಮನಗಳಲ್ಲಿ ನಿತ್ಯ 'ಅಮೃತಮಂಥನ'ವಾಗುತ್ತಿರುತ್ತದೆ ಎಂದವರು ಹೇಳಿದುದು ನನ್ನ ಮನಸ್ಸಿಗೆ ತುಂಬ ಹಿಡಿಯಿತು."

ಮಹತ್ಕಾರ್ಯ ಸಾಧಿಸಿದ ಸಂತೋಷದಿಂದ ಪದ್ಮನಾಭರಾಯರು,

"ಅಷ್ಟಲ್ಲದಿದ್ದರೆ ನಿನ್ನ ಬಾ ಎಂದು ಕರೆಯುತ್ತಿದ್ದೆನೇ ಯೋಗಾ" ಎಂದರು.

## ೨

ಯೋಗಾನರಸಿಂಹಯ್ಯನವರ ಅಮಲ್ದಾರಿಕೆ ನಡೆಸಿದುದರ ಬಗ್ಗೆ ಅನೇಕ ಕಥೆಗಳು ಪ್ರಸಾರದಲ್ಲಿದ್ದವು. ಅವುಗಳನ್ನು ಯಾರಾದರೂ ಪ್ರಸ್ತಾಪಿಸಿದರೆ ಯೋಗಾನರಸಿಂಹಯ್ಯನವರು ಮೌನ ತಾಳುತ್ತಿದ್ದರು. ಕಳೆದುಹೋಗಿದ್ದ ತಮ್ಮ ಸರ್ಕಾರಿ ನೌಕರಿ ಜೀವನವನ್ನು ಅವರು ಒಂದು ಕೆಟ್ಟ ಕನಸೆಂದು ಭಾವಿಸಿದ್ದರು.

ಒಂದು ಸಲ ಅವರು ಮಾಲೂರಿನಲ್ಲಿ ಅಮಲ್ದಾರರಾಗಿದ್ದರು. ಆಗ ಜಿಲ್ಲೆಯ ಧಣಿಗಳಾಗಿದ್ದವರು ಐರೋಪ್ಯರಾದ ಮ್ಯಾಕಲೇನ್ ಸಾಹೇಬರು. ಜಿಲ್ಲಾಧಿಕಾರಿಗಳು 'ಸರ್ಕೀಟ್' ಹೊರಡುವುದಕ್ಕೆ ಮುಂಚೆ, ಅವರ ಪರ್ಸನಲ್ ಕ್ಲರ್ಕ್ ಶಾಮಯ್ಯ, ಅಮಲ್ದಾರರನ್ನು ಕಂಡು, ಸಾಹೇಬರ ಆವಶ್ಯಕತೆಗಳ ಪಟ್ಟಿ ಕೊಟ್ಟು ಹೋಗುವುದು ಪದ್ಧತಿಯಾಗಿತ್ತು.

ಒಂದು ಸಲ ಶಾಮಯ್ಯ ಬಂದು ಅಮಲ್ದಾರರ ಕೈಗೆ ಪಟ್ಟಿ ಕೊಟ್ಟು ಹೋದ.

ಯೋಗಾನರಸಿಂಹಯ್ಯನವರಿಗೆ ಪ್ರಾಣಸಂಕಟಕ್ಕಿಟ್ಟುಕೊಂಡಿತು. ಸಾಹೇಬರಿಗೆ ಕುರಿಮಾಂಸ, ಕೋಳಿ, ಮೀನು, ಮೊಟ್ಟೆ ಇತ್ಯಾದಿಗಳನ್ನು ಒದಗಿಸಬೇಕಾಗಿತ್ತು. ತಮ್ಮ ಶಿರಸ್ತೇದಾರ್ ವೆಂಕಟಪ್ಪನನ್ನು ಬರಮಾಡಿಕೊಂಡು,

"ಡೆಪ್ಯುಟಿ ಕಮಿಷನರ್ ಸಾಹೇಬರು ಬರುತ್ತಾರಂತೆ—ಗೊತ್ತಾಯಿತೇ ವೆಂಕಟಪ್ಪ" ಎಂದು ಕೇಳಿದರು.

"ಗೊತ್ತಾಯಿತು ಸ್ವಾಮಿ—"

"ಶಾಮಯ್ಯ ಬಂದಿದ್ದ—ಪಟ್ಟಿ ಕೊಟ್ಟು ಹೋದ. ಇಲ್ಲಿ ನೋಡು"

ಎಂದು ಪಟ್ಟಿಯನ್ನು ಅವನ ಕೈಯಲ್ಲಿಟ್ಟು,

" ಇವುಗಳಿಗೆಲ್ಲಾ ಖರ್ಚು ಎಷ್ಟಾಗತ್ತೆ "

ಎಂದು ಕೇಳಿದರು.

ವೆಂಕಟಪ್ಪ ಸ್ಥೂಲವಾಗಿ ಲೆಕ್ಕ ಹಾಕಿ,

" ಸುಮಾರು ಅರವತ್ತು ಎಪ್ಪತ್ತು ರೂಪಾಯಿ ಆಗುತ್ತದೆ ಸ್ವಾಮಿ."

" ನನ್ನ ಕೊಂಪೆ ಕೂಲಿ ಹೊಗುತ್ತದಲ್ಲಯ್ಯ. ಅರವತ್ತು ಎಪ್ಪತ್ತು ರೂಪಾಯಿ ಎಂದರೆ ನನ್ನ ಹತ್ತು ದಿನಗಳ ಸಂಬಳ."

" ತಾವು ಯೋಚನೆ ಮಾಡಬೇಡಿ ಸ್ವಾಮಿ—ನಾನು ನೋಡಿಕೊಳ್ಳು ತ್ತೇನೆ."

" ನೀನು ಹೇಗಯ್ಯ ನೋಡಿಕೊಳ್ಳುತ್ತೀ ? ನನಗಿದು ಹತ್ತು ದಿನಗಳ ಸಂಬಳವಾದರೆ ನಿನಗೆ ಇಪ್ಪತ್ತು ದಿನಗಳ ಸಂಬಳ."

" ಶಾನುಭೋಗರುಗಳು ಸಹಾಯ ಮಾಡುತ್ತಾರೆ."

" ಅವರ ಹತ್ತಿರ ಲಂಚ ಹೊಡೆಯುತ್ತೀಯಾ ? "

" ಲಂಚ ಅಲ್ಲ ಸ್ವಾಮಿ ಮಾಮೂಲ್ ! "

" ಮಾಮೂಲ್ ಗೀಮೂಲ್ ಮುಟ್ಟಕೂಡದು. ಈ ತಾಲ್ಲೂಕಿಗೆ ನಾನು ಅಮಲ್ದಾರ ಎನ್ನುವುದನ್ನು ಜ್ಞಾಪಕದಲ್ಲಿಟ್ಟುಕೊಂಡಿರು "

ಎಂದು ಕಿಸೆಯಿಂದ ಎಪ್ಪತ್ತು ರೂಪಾಯಿಗಳನ್ನು ತೆಗೆದು ಅವನಿಗಿತ್ತು,

" ಟಿ.ಬಿಯಲ್ಲಿ ವ್ಯವಸ್ಥೆ ಮಾಡು. ಮೇಟಿ ಕರೀಮುನಿಗೆ ಹೇಳು—ಅವನೇ ಜೋಯಿಸಿ ಹಾಕುತ್ತಾನೆ."

" ಹಾಗೇ ಆಗಲಿ ಸ್ವಾಮಿ."

" ಪ್ರತಿಯೊಂದು ಸಾಮಾನಿನ ಬಿಲ್ ತೆಗೆದುಕೊಂಡು ನನಗೆ ತಂದುಕೊಡು "

ಎಂದು ಹೇಳಿದರು.

ಮ್ಯಾಕಲೇನ್ ಸಾಹೇಬರು ದಯೆಮಾಡಿಸಿ, ಎರಡು ದಿನ ಮಾಲೂರಿನಲ್ಲಿ 'ಕ್ಯಾಂಪ್'ಮಾಡಿ, ಇನ್ಸ್‌ಪೆಕ್ಷನ್ ಮುಗಿಸಿಕೊಂಡು ಹೊರಡಲನುವಾದರು.

ಅಮಲ್ದಾರರು ಕಾಣಿಸಿಕೊಳ್ಳಲು ಮ್ಯಾಕಲೇನ್ ಸಾಹೇಬರು ಅವರ ಕೈಹಿಡಿದು ಕುಲುಕಿ,

"ವ್ಯವಸ್ಥೆ ಬಹಳ ಚೆನ್ನಾಗಿತ್ತು ಮಿ. ಅಮಲ್ದಾರ್. ಎಲ್ಲ ಅಮಲ್ದಾರರೂ ನಿಮ್ಮಷ್ಟೇ ದಕ್ಷರಾಗಿದ್ದರೆ ಸಂಸ್ಥಾನದ ಆಡಳಿತ ನೂರು ಪಾಲು ಉತ್ತಮವಾಗಿರುತ್ತಿತ್ತು."

"ಎಲ್ಲಾ ತಮ್ಮ ವಿಶ್ವಾಸ ಸ್ವಾಮಿ."

"ಇನ್ನೇನು—ನಾವು ಹೊರಡಬಹುದೋ ?"

ಯೋಗಾನರಸಿಂಹಯ್ಯನವರು ಒಂದು ದಪ್ಪ ಲಕೋಟೆಯನ್ನು ಕಿಸೆಯಿಂದ ತೆಗೆದು ಸಾಹೇಬರ ಕೈಗಿತ್ತರು.

ಸಾಹೇಬರು ಅದರಲ್ಲಿದ್ದ ಬಿಲ್‌ಗಳನ್ನೆಲ್ಲಾ ಪರಾಮರ್ಶಿಸುತ್ತಿದ್ದಂತೆ ಅವರ ಕೆಂಪನೆಯ ಮುಖ ಮತ್ತಷ್ಟು ಕೆಂಪಗಾಯಿತು.

"ಏನಿದೆಲ್ಲಾ—ನಾನ್‌ಸೆನ್ಸ್ (Non-sense)" ಎಂದರು.

"ತಮ್ಮ ಎರಡು ದಿನದ ಮೊಕ್ಕಾಮಿನ ಖರ್ಚು. ಪ್ರತಿಯೊಂದು ಬಾಬಿಗೂ ಬಿಲ್ ಒದಗಿಸಿದ್ದೇನೆ—ಪರಾಮರ್ಶಿಸಬಹುದು."

ಸಾಹೇಬರು ಮುಖ ಸಿಂಡರಿಸಿಕೊಂಡು,

"ನಿಮ್ಮ ಡೆಪ್ಯುಟಿ ಕಮಿಷನರಿಗೆ ಎರಡು ದಿನ ಆತಿಥ್ಯಮಾಡುವ ಯೋಗ್ಯತೆ ನಿಮಗಿಲ್ಲವೇನ್ರೀ ?"

"ಇದೆ—ಸ್ವಾಮಿ"

"ಹಾಗಾದರೆ ಇದೇನು ?"

"ತಮಗೆ ಆತಿಥ್ಯಮಾಡಬೇಕಾದರೆ ನಾನು ಲಂಚ ಹೊಡೆಯಬೇಕು. ಲಂಚ ಹೊಡೆಯುವ ಅಭ್ಯಾಸ ನನಗಿಲ್ಲ. ಖಾವಂದಿರು ಕೊಡುತ್ತಿರುವ ಸಂಬಳದಲ್ಲಿ ನಾನು ಮರ್ಯಾದೆಯಾಗಿ ಜೀವನಮಾಡುತ್ತಿದ್ದೇನೆ. ನಾನೂ ಮಕ್ಕಳೊಂದಿಗ."

ಅಮಲ್ದಾರರ ದಿಟ್ಟನುಡಿ ಕೇಳಿ ಸಾಹೇಬರಿಗೆ ಸಂತೋಷವಾಯಿತು. ಮತ್ತೊಮ್ಮೆ ಅವರು ಅಮಲ್ದಾರರ ಕೈ ಹಿಡಿದು ಕುಲುಕುತ್ತಾ,

"ನಿಮ್ಮ ಪರಿಚಯವಾದುದು ನನಗೆ ಸಂತೋಷವಾಗಿದೆ. ನೀವು ಸತ್ಯವಂತರು. ನಿಮಗೆ ಇನ್‌ಕ್ರಿಮೆಂಟ್ (Increment) ಕೊಡಲು ನಾನು ರೆವಿನ್ಯೂ ಕಮಿಷನರಿಗೆ ಡಿ.ಓ. ಬರೆಯುತ್ತೇನೆ"

ಎಂದು ಶಾಮಯ್ಯನನ್ನು ಕರೆದು,

" ಅಮಲ್ದಾರರಿಗೆ ಅರವತ್ತೈದು ರೂಪಾಯಿ ಕೊಡು ಶಾಮಯ್ಯ" ಎಂದು ಹೇಳಿದರು.

ಇನ್ನೊಂದು ಸಲ ನಡೆದ ಘಟನೆ ಇಷ್ಟು ಸುಖಪರ್ಯವಸಾಯಿಯಾಗಲಿಲ್ಲ.

ಯೋಗಾನರಸಿಂಹಯ್ಯನವರಿಗೆ ಚೆನ್ನಪಟ್ಟಣಕ್ಕೆ ವರ್ಗವಾಯಿತು. ಅವರು ಚಾರ್ಜು ವಹಿಸಿಕೊಂಡಂದಿನಿಂದಲೇ ಜನ ಪಟೇಲ್ ತಿಮ್ಮೇಗೌಡನ ಬಗ್ಗೆ ದೂರು ಹೇಳಲಾರಂಭಿಸಿದರು. ಜನರಿಗೆ, ಅಧಿಕಾರಿಗಳಿಗೆ ಪಟೇಲ ಕೊಡುತ್ತಿದ್ದ ಕಿರುಕುಳದ ಬಗ್ಗೆ ಕೇಳಿ ಕೇಳಿ ಯೋಗಾನರಸಿಂಹಯ್ಯನವರಿಗೆ ಸಾಕಾಗಿ ಹೋಗಿತ್ತು. ಅವರು ಗೋಪ್ಯವಾಗಿ ವಿಚಾರಣೆ ನಡಸಿ, ಜನ ಹೇಳಿದ್ದುದು ನಿಜವೆಂಬುದನ್ನು ಮನಗಂಡರು.

ಒಂದು ದಿನ ಅಮಲ್ದಾರರು, ತಾಲ್ಲೂಕು ಕಛೇರಿಯಲ್ಲಿ ಸ್ವಸ್ಥಾನದಲ್ಲಿ ಕುಳಿತಿದ್ದಾರೆ.

ಬಾಗಿಲು ಕಾಯುತ್ತಿದ್ದ ಸೇವಕನನ್ನು ಪಕ್ಕಕ್ಕೆ ಸರಿಸಿ, ಒಳಗೆ ಪ್ರವೇಶಿಸಿದ ಒಬ್ಬ ದೃಢಕಾಯದ ವ್ಯಕ್ತಿ, ಅಮಲ್ದಾರರ ಮೇಜಿನ ಮೇಲೆ ಎರಡು ನಿಂಬೆಯ ಹಣ್ಣುಗಳನ್ನಿಟ್ಟು ಅವರ ಸಮಯ ಕಾಯುತ್ತ ನಿಂತ.

ಅಮಲ್ದಾರರು ಕತ್ತೆತ್ತಿ ನೋಡಿ,

" ನೀವು ಯಾರ್‍ರೀ ? " ಎಂದು ಕೇಳಿದರು.

" ಪಟೇಲ್ ತಿಮ್ಮೇಗೌಡ್ರು ! "

" ನೀವೇನೋ ತಿಮ್ಮೇಗೌಡ್ರು — ಆಳನ್ನು ಪಕ್ಕಕ್ಕೆ ಸರಿಸಿ, ಹೀಗೆ ಒಳನುಗ್ಗುವುದು ಮರ್ಯಾದೆಯಲ್ಲ ಎನ್ನುವುದು ನಿಮಗೆ ಗೊತ್ತಿಲ್ಲವೇ ಗೌಡರೇ ? "

ಗೌಡ ತಿರಸ್ಕಾರದಿಂದ ನಕ್ಕು,

" ನಿಮ್ಮ ರೂಲೀಸ್ ಗೀಲೀಸ್ ನಮ್ತಾವ ನಡೆಯೋಕಿಲ್ಲ ಅಮಲ್ದಾರ್ರೇ ! ನೀವು ಇಲ್ಲೀಗೆ ಒಸಬರು — ತಿಮ್ಮೇಗೋಡ್ರ ಇಷ್ಯ ನಿಮ್ಗೆ ತಿಳೀದು "

ಎಂದು ಎದುರಿಗಿದ್ದ ಕುರ್ಚಿಯ ಮೇಲೆ ಕುಳಿತ.

" ಏನು, ಪಟೇಲ್ ತಿಮ್ಮೇಗೌಡ್ರು ಇಷ್ಟು ದೂರ ಪಾದ ಬೆಳಸಿದ್ದು ? "

" ನಿಮ್ತಾವ ಒಸಿ ಕೆಲ್ಸಾ ಐತೆ."

" ಅಪ್ಪಣೆಯಾಗಲಿ."

“ ಚೆನ್ನೇಗೌಡ ಕಂದಾಯ ಬಾಕಿ ಮಡಿಕೊಂಡದ್ದಕ್ಕೆ ಅವನ್ಗೆ ಲೋಟೀಸ್ ಕೊಟ್ಟವ್ರಂತೆ ! ”

“ ಹೌದು — ಕೊಟ್ಟದ್ದೇವೆ. ಹಾಗೇ ಎಲ್ಲಾ ಬಾಕೀದಾರರಿಗೂ ನೋಟೀಸ್ ಹೋಗಿದೆ.”

“ ಚೆನ್ನೇಗೋಡಂಗೆ ನೀವು ಕೊಟ್ಟರೋ ಲೋಟೀಸ್ ಇಂದಕ್ಕೆ ತಕ್ಕೊಳ್ಬೇಕು.”

“ ಏಕೆ ? ”

“ ಯಾಕೇಂತ ಕೇಳ್ತೀರಲ್ರೀ—ನಾವು ಏಳ್ತೀವಿ—ತಕ್ಕೊಳ್ಳಿ.”

“ ನೀವು ಯಾರೋ ? ”

“ ಪಟೇಲ್ ತಿಮ್ಮೇಗೋಡ್ರು.”

“ ನಾನು ಯಾರು ಗೊತ್ತೋ ? ”

“ ಗೊತ್ತು—ಅಮುಲ್ದಾರ್ರು.”

“ ಈ ತಾಲ್ಲೂಕಿನ ಧಣಿ.”

“ ಅದೆಲ್ಲಾ ನಮ್ತಾವ ನಡೆಯೋಕಿಲ್ರೀ. ನಮ್ಮ ಐದ, ರೆವಿನ್ಯೂ ಕಮಿಷ್ನರ್ ಆಫೀಸ್ನಲ್ಲಿ ಸೂಪರೆಂಟ್ ಆಗವ್ನೆ—ಗೊತ್ತೋ ? ನೀವು ಗುರ್ ಅಂದ್ರೆ ಕೊಪ್ಪಕ್ಕೆ ಎತ್ತಂಗಡಿ ಆಗ್ತೈತೆ.”

ಅಮುಲ್ದಾರರಿಗೆ ಕೋಪ ನೆತ್ತಿಗೇರಿತು.

ಯಾವ ಭಾವನೆಯನ್ನೂ ವ್ಯಕ್ತಮಾಡದೆ ಅಮುಲ್ದಾರರು ಕೇಳುತ್ತ ಕುಳಿತರು.

“ ನೋಡಿ ಅಮುಲ್ದಾರ್ರೇ-ಇದು ಚನ್ನಪಟ್ಣ—ಪಟೇಲ್ ತಿಮ್ಮೇಗೋಡ್ರು ಬದುಕಿರೋಟಂಕಾ ಯಾರ ಆಟಾನೂ ನಡೆಯಾಕಿಲ್ಲ. ನೀವು ನಮುಗೆ ಕುಮ್ಮಕ್ಕಾಗಿದ್ರೆ ನಾವು ನಿಮ್ಗೆ ಕುಮ್ಮಕ್ಕಾಗಿರ್ತೀವಿ.-ನೀವಿನ್ನೂ ಚಿಕ್ಕೋರು—ಅನುಬೋವಾ ಸಾಲ್ದು—”

ಅಮುಲ್ದಾರರು ಗೌಡನನ್ನು ದುರುಗುಟ್ಟಿಕೊಂಡು ನೋಡಿ, ಮೇಜಿನ ಮೇಲಿದ್ದ ಕರೆಗಂಟೆ (Calling bell) ಬಾರಿಸಿದರು. ಬಾಗಿಲಲ್ಲಿದ್ದ ಆಳು ಒಳಕ್ಕೆ ಬರಲು,

“ ಈ ಗೌಡನ್ನ ಕತ್ತು ಹಿಡಿದು ಆಚೆಗೆ ನೂಕೋ ? ” ಎಂದರು.

ಪಟೇಲ್ ತಿಮ್ಮೇಗೌಡ ಪರಶುರಾಮಾವತಾರತಾಳಿ ಎದ್ದು ನಿಂತ. ಕೋಪದಿಂದವನು ಕಂಪಿಸುತ್ತಾ, ಮೀಸೆಯ ಮೇಲೆ ಕೈಯಿಟ್ಟು,

"ಇದ್ಕೇನಾಗ್ತೈತೆ ನೋಡುವೆಯಂತೆ—ನನ್ನೋ ನೀನು ಕತ್ತು ಹಿಡಿದು ದಬ್ಬಿಸೋನು—"

ಎಂದೆದ್ದು ಹೋದ.

ತಿಮ್ಮೇಗೌಡ ಸುಮ್ಮನಿರುವ ಆಸಾಮಿಯಲ್ಲವೆಂಬುದು ಯೋಗಾ ನರಸಿಂಹಯ್ಯನವರಿಗೆ ಗೊತ್ತಿತ್ತು. ಅವರು ಕೂಡಲೆ ಬೆಂಗಳೂರಿಗೆ ಹೋಗಿ ಡೆಪ್ಯುಟಿ ಕಮಿಷನರ್ ಸಾಹೇಬರನ್ನು ಕಂಡು ನಡೆದಿದ್ದ ವಿದ್ಯಮಾನ ವರ್ಣಿಸಿದರು.

"ಗೌಡ ಮಹಾಪ್ರಬಲ—ಅವನ ವಿರೋಧ ಏಕೆ ಕಟ್ಟಿಕೊಂಡಿರಿ ಯೋಗಾನರಸಿಂಹಯ್ಯ."

"ಇವನ ಪಾಳೆಯಗಾರಿಕೆಗೆ ನಾನೂ ಮಣಿದರೆ ತಾಲ್ಲೂಕು ಉಳಿಯು ತ್ತದೆಯೇ ಸ್ವಾಮಿ. 'ನನ್ನ ಮಗ ರೆವಿನ್ಯೂ ಕಮಿಷನರ್ ಆಫೀಸ್ ಸೂಪರಿಂ ಟೆಂಡೆಂಟ್—ಅವನಿಗೆ ಹೇಳಿ ನಿಮ್ಮನ್ನು ಕೊಪ್ಪಕ್ಕೆ ವರ್ಗಮಾಡಿಸುತ್ತೇನೆ' ಎಂದು ಗೌಡ ನನ್ನ ಆಫೀಸಿನಲ್ಲೇ ಕುಳಿತುಕೊಂಡು ಹೇಳುತ್ತಾನೆ."

"ಈ ಪಟೇಲನ ಹಾವಳಿ ವಿಪರೀತವಾಗಿದೆಯೆಂಬುದನ್ನು ನಾನು ಬಲ್ಲೆ. ನೀವು ಚೆನ್ನಪಟ್ಟಣಕ್ಕೆ ಹಿಂದಿರುಗಿ—ಉಳಿದ ವಿಷಯ ನನಗಿರಲಿ"

ಎಂದು ಭರವಸೆಯಿತ್ತರು.

ತಿಮ್ಮೇಗೌಡನ ಅಟಾಟೋಪದ ಪರಿಣಾಮ ಅವನ ಮಗ ಸಿದ್ದೇಗೌಡನ ಮೇಲಾಯಿತು. ಒಂದೇ ತಿಂಗಳಲ್ಲಿ ಸಿದ್ದೇಗೌಡನಿಗೆ ಸೀರ್ಯಕ್ಕೆ ಎತ್ತಂಗಡಿ ಯಾಯಿತು.

ಚೆನ್ನಪಟ್ಟಣದಲ್ಲಿ ತಿಮ್ಮೇಗೌಡನ ಹುಟ್ಟು ಅಡಗಿ ಹೋಯಿತು.

## ೩

ಯೋಗಾನರಸಿಂಹಯ್ಯನವರಿಗಿದ್ದುದೆಲ್ಲಾ ಆನೇಕಲ್ಲಿನಲ್ಲಿ ಐದು ಎಕರೆ ಜಮೀನು—ಬೆಂಗಳೂರಿನಲ್ಲಿ ಒಂದು ಮನೆ. ಜಮೀನು ಪಿತ್ರಾರ್ಜಿತವಾಗಿ ಬಂದದ್ದು—ಮನೆ ಅವರ ಸ್ವಂತ ಗಳಿಕೆ. ಶಂಕರಪುರದಲ್ಲಿದ್ದ ಮನೆಯನ್ನು ಯೋಗಾನರಸಿಂಹಯ್ಯನವರು ಮೊದಲು ಭೋಗ್ಯಕ್ಕೆ ತೆಗೆದುಕೊಂಡು, ತರುವಾಯ ಖರೀದಿಗೆ ಬರೆಸಿಕೊಂಡರು. ಮೇಲುಸಂಪಾದನೆಗೆ ಅವರು ಕೈಚಾಚದಿದ್ದುದರಿಂದ ಹೆಚ್ಚು ಸಂಪಾದನೆ ಮಾಡಲಾಗಲಿಲ್ಲ. ಆದರ್ಶಗೃಹಿಣಿಯಾಗಿದ್ದ ಕಮಲಾಕ್ಷಮ್ಮ ಮಿತರಣೆಯಾಗಿ ಸಂಸಾರಮಾಡಿ, ಮಕ್ಕಳನ್ನು ಮುಂದಕ್ಕೆ ತಂದಿದ್ದರು.

"ಮಕ್ಕಳಿಗೆ ನಾವು ಆಸ್ತಿ ಇಡುವುದಕ್ಕಾಗುವುದಿಲ್ಲ ಕಮಲೂ, ಚೆನ್ನಾಗಿ ಓದಿಸಿಬಿಡೋಣ. ಅವರ ಅದೃಷ್ಟವಿದ್ದಂತೆ ಆಗಲಿ"

ಎಂದು ಗಂಡ ಹೇಳಿದ ಮಾತಿಗೆ ಕಮಲಾಕ್ಷಮ್ಮನವರು ಹಾರ್ದಿಕವಾಗಿ ಒಪ್ಪಿಗೆಯಿತ್ತಿದ್ದರು.

ಅವರ ಹಿರಿಯ ಮಗ ಸುಬ್ಬುಕೃಷ್ಣಯ್ಯ ಎಂ.ಎ. ಪಾಸು ಮಾಡಿದ.

"ಮುಂದೆ ಏನು ಮಾಡುತ್ತೀ, ಸುಬ್ಬುಕೃಷ್ಣ"

ಎಂದು ತಂದೆ ಕೇಳಿದರು.

"ಯೂನಿವರ್ಸಿಟೀಗೆ ಅಪ್ಲಿಕೇಷನ್ ಹಾಕಿದ್ದೀನಿ, ಕಾಲೇಜಿನಲ್ಲಿ ಕೆಲಸ ಸಿಕ್ಕಿದರೂ ಸಿಕ್ಕಬಹುದು."

ಯೋಗಾನರಸಿಂಹಯ್ಯನವರು ಯೋಚಿಸುತ್ತಾ,

"ತಾಪೇದಾರಿ ನನ್ನ ಕಾಲಕ್ಕೇ ಸಾಕಯ್ಯ. ಬಿ.ಎಲ್. ಅಥವಾ ಎಲ್‌ಎಲ್.ಬಿ. ಮಾಡಿಕೊಂಡು ಲಾಯರಾಗಿ ಸ್ವತಂತ್ರಜೀವನ ಸಾಗಿಸು."

" ನನಗೆ ಲಾಯರಾಗಲು ಇಷ್ಟವಿಲ್ಲ ಅಣ್ಣ."

" ಹಾಗಾದರೆ ನಿನ್ನ ಇಷ್ಟಬಂದಂತೆ ಮಾಡಪ್ಪ " ಎಂದರು.

ವಿಶ್ವವಿದ್ಯಾನಿಲಯ ನೇಮಿಸಿದ್ದ ಉಪಸಮಿತಿಯ ಮುಂದೆ ಹಾಜರಾಗಲು ಸುಬ್ಬುಕೃಷ್ಣಯ್ಯನಿಗೆ ಕರೆ ಬಂದಿತು.

ವಾಕ್-ಪರೀಕ್ಷೆಯಲ್ಲಿಯೂ ಅವನು ಉತ್ತೀರ್ಣನಾಗಲು, ಮಹಾರಾಜಾ ಕಾಲೇಜಿನ ಅರ್ಥಶಾಸ್ತ್ರ ವಿಭಾಗದಲ್ಲಿ ಅವನಿಗೆ ಲೆಕ್ಚರರ್ ಹುದ್ದೆ ದೊರಕಿತು.

ಸುಬ್ಬುಕೃಷ್ಣಯ್ಯ ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಕನ್ಯಾಪಿತೃಗಳು ಯೋಗಾನರಸಿಂಹಯ್ಯನವರನ್ನಾಶ್ರಯಿಸಲಾರಂಭಿಸಿದ್ದರು.

" ಹುಡುಗನ ವಿದ್ಯಾಭ್ಯಾಸ ಮುಗಿಯಲಿ "

ಎಂದು ಯೋಗಾನರಸಿಂಹಯ್ಯನವರು ತಳ್ಳಿಕೊಂಡೇ ಬಂದಿದ್ದರು.

ಸುಬ್ಬುಕೃಷ್ಣ ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಅವನಿಗೆ ಕೆಲಸ ಸಿಕ್ಕಿದುದನ್ನು ಕೇಳಿದ ಕೂಡಲೆ ಲಾಯರ್ ಶಂಕರನಾರಾಯಣರಾಯರು ಬೆಂಗಳೂರಿಗೆ ಧಾವಿಸಿ ಬಂದರು.

ಶಂಕರನಾರಾಯಣರಾಯರು ಮೈಸೂರಿನಲ್ಲಿ ಹಿರಿಯ ವಕೀಲರಾಗಿದ್ದುದಲ್ಲದೆ, ಹಲವು ಸಂಘ ಸಂಸ್ಥೆಗಳ ಪೋಷಕರು, ಅಧ್ಯಕ್ಷರು ಆಗಿದ್ದರು. ಅವರ ಏಕಮಾತ್ರ ಪುತ್ರಿ ಶಾರದಾ, ಡಿಗ್ರಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದಳು. ವೀಣೆ ವೆಂಕಟಸುಬ್ಬಯ್ಯನವರು ಅವಳಿಗೆ ನಾಲ್ಕು ವರ್ಷ ವೀಣೆ ಪಾಠ ಹೇಳಿ ನಿಷ್ಣಾತಳನ್ನಾಗಿ ಮಾಡಿದ್ದರು.

ಮನೆಗೆ ಬಂದ ಶಂಕರನಾರಾಯಣರಾಯರನ್ನು ಆದರದಿಂದ ಯೋಗಾನರಸಿಂಹಯ್ಯ ಸ್ವಾಗತಿಸಿ, ನಸುನಗುತ್ತಾ,

" ನಿಮ್ಮ ತಾಳ್ಮೆ ನಿಜವಾಗಿ ಮೆಚ್ಚತಕ್ಕದ್ದೇ ರಾಯರೇ. ಎರಡು ವರ್ಷವಾದರೂ ಮಗಳಿಗೆ ಲಗ್ನಮಾಡದೆ ಹಾಗೇ ಇಟ್ಟುಕೊಂಡಿರುವಿರಲ್ಲಾ ! "

" ಮಗನ ವಿದ್ಯಾಭ್ಯಾಸ ಮುಗಿಯಲಿ ಎಂದು ತಾವೇ ಅಪ್ಪಣೆ ಕೊಡಿಸಿದ್ದಿರಿ."

" ಈಗ ನಿಮ್ಮ ಮಗಳ ವಯಸ್ಸೆಷ್ಟು ? "

" ಇಪ್ಪತ್ತು."

" ನಮ್ಮ ಸುಬ್ಬುಕೃಷ್ಣನಿಗೆ ಇಪ್ಪತ್ತುನಾಲ್ಕು."

" ನಾಲ್ಕು ವರ್ಷಗಳ ವ್ಯತ್ಯಾಸ...."

" ಇರಲಿ—ಅದಕ್ಕೇನು ? "

" ಜಾತಕಗಳೂ ಅನುಕೂಲವಾಗಿವೆ."

" ನಮ್ಮ ಹುಡುಗನ ಹತ್ತಿರ ಈ ವಿಷಯ ನಾವಿನ್ನೂ ಪ್ರಸ್ತಾಪಿಸಿಲ್ಲ."

" ತಾವು ಒಂದು ಕೆಲಸ ಮಾಡಿದರೆ ನನಗೆ ಉಪಕಾರವಾಗುತ್ತದೆ."

" ಹೇಳಿ."

" ನೀವೂ ಸೌಭಾಗ್ಯವತಿಯವರೂ ನನ್ನೊಂದಿಗೆ ಏಕೆ ಬರಬಾರದು ? ನಾನು ಕಾರ್ ತಂದಿದ್ದೇನೆ. ಹೇಗೂ ತಮ್ಮ ಮಕ್ಕಳು ಮೈಸೂರಿನಲ್ಲೇ ಇದ್ದಾರೆ. ವಧೂವರ ಪರಸ್ಪರ ನೋಡಿದಂತೆಯೂ ಆಗುತ್ತದೆ—ಈ ವಿಷಯ ಇತ್ಯರ್ಥ ಮಾಡಿಬಿಡಬಹುದು."

" ನಿಮ್ಮೊಂದಿಗೆ ನಾನೂ ನಮ್ಮ ಮನೆಯವರು ಅಲ್ಲದೆ ನನ್ನ ಪರಮಮಿತ್ರ ಪದ್ಮನಾಭರಾಯ, ಅವನ ಕುಟುಂಬ ಬರಬೇಕಾಗುತ್ತದೆ."

" ಆಗಬಹುದು. ಕಾರ್ ದೊಡ್ಡದಾಗಿದೆ."

" ತಡೆಯಿರಿ — ಯಜಮಾನಿತಿಯನ್ನು ಒಂದು ಮಾತು ಕೇಳಿ ಬಿಡುತ್ತೇನೆ "

ಎಂದೆದ್ದು ಒಳಗೆ ಹೋಗಿ ಬಂದು,

" ಆಕೆ ಒಪ್ಪಿದ್ದಾರೆ ರಾಯರೇ—ಎಂದು ಹೊರಡಬೇಕು."

" ನಾಳೆ ಬೆಳಿಗ್ಗೆ ಹೊರಡಲು ಸಾಧ್ಯವೇ ? "

" ಸಾಧ್ಯವಲ್ಲದೆ ಏನು ?—ಇನ್ನೊಂದು ಮಾತು—ನಾನು ಖಂಡಿತವಾದಿ. ಸ್ಪಷ್ಟವಾಗಿ ಮಾತನಾಡುತ್ತೇನೆಂದು ತಾವು ಬೇಸರಪಟ್ಟುಕೊಳ್ಳಬಾರದು."

" ಹೇಳಿ ಸ್ವಾಮಿ."

" ನಾನು ಹೆಚ್ಚು ಅನುಕೂಲಸ್ಥನಲ್ಲವೆಂಬುದು ತಮಗೆ ತಿಳಿದಿರಬಹುದು. ಕಷ್ಟಾರ್ಜಿತ ಹಣವನ್ನು ಮಕ್ಕಳ ವಿದ್ಯಾಭ್ಯಾಸಕ್ಕೆ ವಿನಿಯೋಗಿಸಿದ್ದೇನೆ. ನಿಮ್ಮ ಅಂತಸ್ತಿಗೆ ತಕ್ಕಂತೆ ನಿಮ್ಮ ಮಗಳಿಗೆ ಒಡವೆ, ವಸ್ತ್ರ ಕೊಡುವುದು ನನಗೆ ಸಾಧ್ಯವಿಲ್ಲ. ಕೈಗೆ ಒಂದು ಜತೆ ಬಳೆ, ಕುತ್ತಿಗೆಗೆ ಎರಡೆಳೆ ಸರ, ಒಂದು ಉಂಗುರ, ಮಾಂಗಲ್ಯ ಇಷ್ಟೇ ನಾನು ಕೊಡಲು ಸಾಧ್ಯ."

" ನಿಮ್ಮಂಥ ಧರ್ಮಾತ್ಮರ ಸಂಬಂಧ ಬೆಳಸುವುದಕ್ಕಿಂತ ಹೆಚ್ಚಿನದೇನು ಬೇಕು ಸ್ವಾಮಿ. ನಿಮ್ಮ ಸೊಸೆಗೆ ನೀವು ಏನು ಕೊಟ್ಟರೂ ಸಂತೋಷ— ಏನು ಕೊಡದಿದ್ದರೂ ಸಂತೋಷ."

" ಸರಿ."

" ಬೆಳಿಗ್ಗೆ ಬೇಗ ಹೊರಡೋಣ. ಹನ್ನೆರಡು ಗಂಟೆಗೆ ರಾಹುಕಾಲ ಆರಂಭವಾಗುತ್ತದೆ. ಆ ವೇಳೆಗೆ ನಾವು ಮೈಸೂರು ತಲುಪುವುದು ಒಳ್ಳೆಯದು."

" ಎಂಟು ಗಂಟೆಗೆ ನಾವು ಸಿದ್ಧವಾಗಿರುತ್ತೇವೆ"

ಎಂದು ಯೋಗಾನರಸಿಂಹಯ್ಯನವರು ಆಶ್ವಾಸನವಿತ್ತರು.

ಭಾವೀಬೀಗರೊಂದಿಗೆ ಎಂಟು ಗಂಟೆಗೆ ಬೆಂಗಳೂರು ಬಿಟ್ಟ ಶಂಕರ ನಾರಾಯಣರಾಯರು ಹನ್ನೊಂದು ಗಂಟೆಗೆ ಮೈಸೂರು ತಲುಪಿದರು.

ಶಂಕರನಾರಾಯಣರಾಯರ ಧರ್ಮಪತ್ನಿ ಪದ್ಮಾವತಮ್ಮನವರು ಕಮಲಾಕ್ಷಮ್ಮನವರನ್ನೂ ನಾಗೂಬಾಯಿಯವರನ್ನೂ ಸ್ವಾಗತಿಸಿ ಒಳಗೆ ಕರೆದೊಯ್ದರು.

ಶಂಕರನಾರಾಯಣರಾಯರು, ಯೋಗಾನರಸಿಂಹಯ್ಯನವರನ್ನೂ ಪದ್ಮ ನಾಭರಾಯರನ್ನೂ ಉಪಚರಿಸುತ್ತ,

" ಸ್ನಾನ, ಊಟ, ವಿಶ್ರಾಂತಿ ಮುಗಿಯಲಿ. ನಾನು ಮೂರು ಗಂಟೆಗೆ ಕಾರು ಕೊಟ್ಟು ಕಳಿಸಿ ನಿಮ್ಮ ಮಕ್ಕಳನ್ನು ಕರೆಸುತ್ತೇನೆ."

" ಆಗಬಹುದು. ಪದ್ಮನಾಭ ಹೋಗಿ ನನ್ನ ಮಗನನ್ನು ಕರೆದುಕೊಂಡು ಬರುತ್ತಾನೆ."

ರಾಯರ ಅಡಿಗೆಯಾಳು, ವೆಂಕಟೇಶ ಎಲ್ಲರಿಗೂ ನಿಂಬೆಯ ಹಣ್ಣಿನ ಪಾನಕ ತಂದಿತ್ತ.

ಪಾನಕ ಕುಡಿಯುತ್ತ ಯೋಗಾನರಸಿಂಹಯ್ಯ,

" ರಾಯರು ತುಂಬ ಅನುಕೂಲವಾಗಿದ್ದಾರೆ ನಾಭಾ."

" ಅವರಿಗೇನಯ್ಯ ಕಡಿಮೆ. ಮೈಸೂರಿನಲ್ಲಿ ಶಂಕರನಾರಾಯಣರಾಯರೇ ಪ್ರಮುಖ ವಕೀಲರು. ಇವರ ಆದಾಯ ಎಷ್ಟು ಬಲ್ಲೆಯಾ ? "

" ಎಷ್ಟು ? "

" ತಿಂಗಳಿಗೆ ಮೂರು ನಾಲ್ಕು ಸಾವಿರ—ಹಣ, ಸ್ಥಾನಮಾನ ಎಲ್ಲಾ ಇದ್ದರೂ ಮನುಷ್ಯ ನಿಗರ್ವಿ—ಬಡವರಾಧಾರಿ. ಇವರ ಮನೆಗೆ ಬಂದವರ್‍ಯಾರೂ ಬರಿಗೈಯಲ್ಲಿ ಹಿಂದಿರುಗಿಲ್ಲ. ಮೈಸೂರಿನ ಸಂಗೀತಗಾರರು, ನಟರು ಶಿಲ್ಪಿಗಳು, ಪಂಡಿತರು ರಾಯರಿಂದ ಬದುಕಿಹೋಗಿದ್ದಾರೆ."

" ನೀನು ಇವರನ್ನು ಬಲ್ಲೆಯಾ ? "

" ಇಲ್ಲ—ನಮ್ಮ ಚಿಕ್ಕರಾಮೂಗೂ ರಾಯರಿಗೂ ತುಂಬ ಸ್ನೇಹ. ಅವನು ಆಗಾಗ್ಗೆ ಇವರ ವಿಷಯ ಹೇಳುತ್ತಿರುತ್ತಾನೆ. ನೀನು ಇಲ್ಲದ ಪ್ರತಿಷ್ಠೆ ಮಾಡಬೇಡ. ಈ ಸಂಬಂಧಕ್ಕೆ ಒಪ್ಪಿಕೊಂಡುಬಿಡು."

" ನೀನು ಹೇಳುವುದು ಒಳ್ಳೇ ಚೆನ್ನಾಗಿದೆ ನಾಭಾ–ಮದುವೆಯಾಗುವವನು ನಾನೇನಯ್ಯಾ ! ಸುಬ್ಬು ಒಪ್ಪಬೇಡವೇ ? "

" ಒಪ್ಪದೆ ಏನು ಮಾಡುತ್ತಾನೆ. ಇಂಥ ಮನೆಯ ಹೆಣ್ಣು ಸಿಕ್ಕಬೇಕಾದರೆ ಅವನು ಪುಣ್ಯ ಮಾಡಿರಬೇಕು."

" ನಿನ್ನ ಕಟ್ಟಿಕೊಂಡು ಬಂದದ್ದೇ ತಪ್ಪಾಯಿತು."

" ಏಕೆ ? "

" ಮನೆಗೆ ಮಾರಿ, ಪರರುಪಕಾರಿ ಎಂದ ಹಾಗೆ, ಇನ್ನೂ ಇಲ್ಲಿಗೆ ಬರುವುದಕ್ಕಿಲ್ಲ—ಆಗಲೇ ರಾಯರ ಪಕ್ಷ ಸೇರಿಕೊಂಡು ಬಿಟ್ಟೆಯಲ್ಲಾ ? "

" ಪಕ್ಷ, ಪ್ರತಿಪಕ್ಷ ಎಲ್ಲಿಂದ ಬಂತು ? ನಿನ್ನ ಮಕ್ಕಳು ನನ್ನ ಮಕ್ಕಳಲ್ಲ ವೇನಯ್ಯಾ? ನಮ್ಮ ಸುಬ್ಬುಕೃಷ್ಣನಿಗೆ ಅಣಿಯಾದ ಕಡೆ ಮದುವೆಯಾಗಬೇಕು ಎಂದು ನೀನೂ ಕಮಲಾಕ್ಷಮ್ಮನವರೂ ಹಾರೈಸುವಂತೆ ನಾನೂ ನಾಗೂ ಹಾರೈಸುತ್ತೇವೆ—"

" ಹೌದಪ್ಪಾ ಹೌದು—ಯಾರು ಇಲ್ಲ ಅಂದರು ಹೇಳು."

ಶಂಕರನಾರಾಯಣರಾಯರು ಬಂದು,

" ನೀರು ತೋಡಿದೆ. ಸ್ನಾನಕ್ಕೆ ಏಳಬಹುದು " ಎಂದರು.

ಪದ್ಮನಾಭರಾಯರು ಬಟ್ಟೆಗಳನ್ನು ತೆಗೆದುಕೊಂಡು ಸ್ನಾನಗೃಹಕ್ಕೆ ಹೋದರು.

ರಾಯರು ಯೋಗಾನರಸಿಂಹಯ್ಯನವರನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ಮನೆಯನ್ನೆಲ್ಲಾ ತೋರಿಸಿ, ಹಿತ್ತಲಿಗೆ ಕರೆದೊಯ್ದರು.

ಅವರ ತರಕಾರಿ ತೋಟ ನೋಡಿದ ಯೋಗಾನರಸಿಂಹಯ್ಯನವರು,

"ತರಕಾರಿಯನ್ನೂ ನೀವೇ ಬೆಳೆಯುತ್ತೀರಿ ?"

"ಮನೆಗಾಗುವಷ್ಟು ತರಕಾರಿ ಬೆಳೆದುಕೊಳ್ಳುತ್ತೇವೆ."

ಯೋಗಾನರಸಿಂಹಯ್ಯ ಹಾಗೇ ಸುತ್ತಾಡಿಕೊಂಡು ಕರುಹಟ್ಟಿಯ ಬಳಿ ಬಂದರು.

ಅಲ್ಲಿ ಕಟ್ಟಿದ್ದ ಎರಡು ಹಸು, ಎರಡು ಎಮ್ಮೆಗಳನ್ನು ನೋಡಿ,

"ಹಾಲು ಎಷ್ಟು ಕೊಡುತ್ತವೆ."

"ಒಟ್ಟು ಹೊತ್ತಿಗೆ ಹತ್ತು ಸೇರು."

"ನಿಮ್ಮ ಮನೆಯಲ್ಲಿ ಎಷ್ಟು ಜನರಿದ್ದೀರಿ ?"

"ಆಳುಗಳನ್ನು ಬಿಟ್ಟರೆ ನಾನು, ನನ್ನ ಕುಟುಂಬ, ಮಗಳು."

"ಇಷ್ಟು ಹಾಲನ್ನೇನು ಮಾಡುವಿರಿ ?"

"ಮನೆಗಾಗುವಷ್ಟು ಇಟ್ಟುಕೊಂಡು, ಉಳಿದುದನ್ನು ಒಂದು 'ಅನಾಥ ಶಿಶುಸಂರಕ್ಷಕ ಸಂಘ'ಕ್ಕೆ ಕೊಡುತ್ತಿದ್ದೇನೆ. ನಾನೇ ಆ ಸಂಘದ ಅಧ್ಯಕ್ಷ."

"ನೀವು ಪುಣ್ಯಾತ್ಮರಪ್ಪಾ !"

ಸ್ನಾನ ಮುಗಿಸಿಕೊಂಡು ಹೊರಗೆ ಬಂದ ಪದ್ಮನಾಭರಾಯರು,

"ನನ್ನ ಸ್ನಾನ ಆಯಿತು—ನೀನು ಮುಗಿಸು ಯೋಗಾ" ಎಂದರು.

"ನಿಮ್ಮ ಚಿಕ್ಕರಾಮರಾಯರು ನಮ್ಮ ಪದ್ಮನಾಭನ ಬಂಧುಗಳಂತೆ !"

"ಹಾಗೇನು ? ಪದ್ಮನಾಭರಾಯರು ನನಗೆ ಹಳೆಯ ಸ್ನೇಹಿತರಾದರು."

"ನಾನು ಸ್ನಾನ ಮುಗಿಸಿಕೊಂಡು ಬರುತ್ತೇನೆ"

ಎಂದು ಯೋಗಾನರಸಿಂಹಯ್ಯ ಸ್ನಾನಗೃಹ ಸೇರಿದರು.

ಅವರು ಬರುವುದರೊಳಗಾಗಿ, ವೆಂಕಟೇಶ ಎಲ್ಲರಿಗೂ ಬಾಳೆಯೆಲೆ ಹಾಕಿ, ಬಡಿಸಲು ಸಿದ್ಧನಾಗಿ ನಿಂತಿದ್ದ.

ಶಂಕರನಾರಾಯಣರಾಯರು, ಯೋಗಾನರಸಿಂಹಯ್ಯ, ಪದ್ಮನಾಭರಾಯರು ಜತೆಯಲ್ಲಿ ಊಟಕ್ಕೆ ಕುಳಿತರು.

ಸುಗ್ರಾಸ ಭೋಜನವಾದ ಮೇಲೆ ನಂಜನಗೂಡಿನ ರಸಬಾಳೆಯ ಹಣ್ಣು, ತಾಂಬೂಲ ಬಂದಿತು.

ತಾಂಬೂಲ ಚರ್ವಣ ಮುಗಿಯಲು ರಾಯರು,
“ ನೀವು ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಿ ”
ಎಂದು ಹೇಳಿ ಹೊರಗೆ ಹೋದರು.

ಯೋಗಾನರಸಿಂಹಯ್ಯನವರು, ಪದ್ಮನಾಭರಾಯರಿಗೆ ಹಾಲಿನ ಕಥೆ ವಿವರಿಸಿ,

“ ನೀನು ಹೇಳಿದ್ದು ನಿಜ ನಾಭಾ—ಈ ಮನುಷ್ಯ ಧರ್ಮಾತ್ಮ” ಎಂದರು.

೪

ಯೋಗಾನರಸಿಂಹಯ್ಯನವರು, ಪದ್ಮನಾಭರಾಯರು ಅರ್ಧ ಗಂಟೆ ಮಲಗಿದ್ದ 'ಶಾಸ್ತ್ರ' ಮಾಡಿ ಎದ್ದು ಕುಳಿತು ಹರಟೆ ಹೊಡೆಯಲಾರಂಭಿಸಿದರು.

ಒಳಗೆ ಹೆಣ್ಣುಮಕ್ಕಳು ಊಟ ಮುಗಿಸಿ, ತಾಂಬೂಲ ಸೇವಿಸುತ್ತ ಕುಳಿತರು.

ಕಮಲಾಕ್ಷಮ್ಮ ಶಾರದೆಯನ್ನು ಅಕ್ಕರೆಯಿಂದ ಕಾಣುತ್ತಾ ತಮ್ಮ ಬಳಿಯೇ ಕೂರಿಸಿಕೊಂಡರು.

"ಶಾರದೂ ಬಿ.ಎ. ಪಾಸು ಮಾಡಿದ್ದಾಳಂತೆ. ನಿಮಗೆ ಗೊತ್ತೇ ನಾಗೂಬಾಯಿ."

"ಹಾಗೇಂತ ನಮ್ಮ ಮನೆಯವರು ಹೇಳಿದರು."

"ಒಂದು ಕಾಲದಲ್ಲಿ ಹೆಂಗಸರು ಓದುಬರಹ ಕಲಿಯುವುದೇ ತಪ್ಪಾಗಿತ್ತು—ಈಗ ನೋಡಿ."

"ಈಗ ಹೆಂಗಸರ ಸ್ಕೂಲು ಕಾಲೇಜುಗಳಲ್ಲಿ ಅಡಿಗೆ ಮಾಡುವುದನ್ನೂ ಕಲಿಸಿಕೊಡ್ತಾರಂತ್ರೀ."

"ಹೌದೇ ಶಾರದಾ?"

"ಹೌದ್ರಿ. ನಮ್ಮ ಡೊಮೆಸ್ಟಿಕ್ ಸೈನ್ಸ್ ಮ್ಯಾಡಾಂ (Domestic Science Madam) ಅಮೇರಿಕಾಕ್ಕೆ ಹೋಗಿ ಕಲಿತು ಬಂದಿದ್ದಾರೆ."

"ಅಮೇರಿಕಾದಲ್ಲಿ ಕಲಿತ ಅಡಿಗೆ ಮೈಸೂರಿನಲ್ಲಿ ಮಾಡಲು ಸಾಧ್ಯವೇ ಶಾರದಾ?"

ಶಾರದಾ ಉತ್ತರಿಸಲಾಗದೆ ಕಕ್ಕುಬಿಕ್ಕಿಯಾದಳು.

" ಹೋಗಲಮ್ಮ—ನಾನೊಂದು ಮಾತು ಕೇಳ್ತೀನಿ. ಅದಕ್ಕೆ ಸರಿಯಾಗಿ ಉತ್ತರ ಹೇಳು."

" ಕೇಳಿ."

" ನೀನು ಕಾಲೇಜಿನಲ್ಲಿ ಏನೇನು ಕಲಿತೆ ? "

" ಫಿಸಿಕ್ಸ್, ಕೆಮಿಸ್ಟ್ರಿ, ಡೊಮೆಸ್ಟಿಕ್ ಸೈನ್ಸ್, ಇಂಗ್ಲಿಷ್, ಮ್ಯಾಥ ಮ್ಯಾಟಿಕ್ಸ್."

" ಕನ್ನಡ."

" ಸೈನ್ಸ್ ಕೋರ್ಸಿಗೆ ಕನ್ನಡ ಇಲ್ರೀ ! "

" ನೀನು ಕಾಲೇಜಿನಲ್ಲಿ ಕಲಿತ ಯಾವ ವಿಷಯ ಪ್ರಯೋಜನಕ್ಕೆ ಬಂದಿದೆ ಹೇಳು."

ಶಾರದಾ ನೀರವಳಾದಳು.

ಮಗಳು ಪೇಚಿಗೆ ಸಿಕ್ಕಿದ್ದುದನ್ನು ಕಂಡ ಪದ್ಮಾವತಮ್ಮನವರು ಮಧ್ಯೆ ಬಾಯಿಹಾಕಿ,

" ಮನೆಯಲ್ಲಿ ಕೆಲಸವಿಲ್ಲ ಬೊಗಸೆಯಿಲ್ಲ—ಸುಮ್ಮನೆ ಕುಳಿತುಕೊಂಡು ಹೊತ್ತು ಕಳೆಯುತ್ತಾಳಲ್ಲಾ ಎಂದು ಕಾಲೇಜಿಗೆ ಕಳಿಸಿದೆವು—ಅಷ್ಟೆ "

ಎಂದು ಮಗಳ ಕಡೆ ತಿರುಗಿ,

" ವೆಂಕಟೇಶನ ಊಟವಾಗಿದ್ದರೆ ಕಾಫಿ ಮಾಡಿ ಗಂಡಸರಿಗೆ ಕೊಡು ಎಂತಾ ಹೇಳು " ಎಂದರು.

ಶಾರದಾ ಎದ್ದು ಹೋಗಲು, ನಾಗೂಬಾಯಿ,

" ಪದ್ಮಾವತಮ್ಮ, ಮನಸ್ಸಿಗೆ ಏನೂ ಬೇಸರಪಟ್ಟುಕೊಳ್ಳಬೇಡಿ. ನಾನು ಒಂದು ಮಾತು ಕೇಳ್ತೀನೆ."

" ಕೇಳಿಯಮ್ಮಾ—ಕೇಳಿ."

" ನಿಮ್ಮ ಮಗಳಿಗೆ ಅಡಿಗೆಯ ಕೆಲಸ ಬರುತ್ತದೆಯೋ ? "

" ಬರುತ್ತದ್ರೀ—ನಾನೇ ಎಲ್ಲಾ ಕಲಿಸಿಕೊಟ್ಟಿದ್ದೇನೆ."

" ನೋಡಿ—ಕಮಲಾಕ್ಷಮ್ಮನವರ ಮನೆಯಲ್ಲಿ ಅಡಿಗೆಯವರಿಲ್ಲ. ಅವರೇ ಎಲ್ಲಾ ಮಾಡಿಕೊಳ್ಳುತ್ತಾರೆ. ನಾಳೆ ಮನೆಗೆ ಬಂದ ಸೊಸೆ, ನನಗೆ ಅಡಿಗೆ ಬರುವುದಿಲ್ಲ ಎಂದು ಹೇಳಿದರೆ ಚೆನ್ನಾಗಿರುವುದಿಲ್ಲ."

“ ನೀವು ಹೇಳುವುದರಲ್ಲಿ ಎಳ್ಳಷ್ಟೂ ಸುಳ್ಳಿಲ್ರೀ. ತನ್ನ ಸಹಪಾಠಿಗಳ ಕಥೆಯನ್ನು ಶಾರದೆಯೇ ಹೇಳುತ್ತಿರುತ್ತಾಳೆ. ಈ ಕಾಲದಲ್ಲಿ ಹುಡುಗಿಯರು ಓದಿದರೆ, ಅಡಿಗೆ ಮಾಡುವುದು ಹೀನಾಯ ಎಂದು ಭಾವಿಸುತ್ತಾರೆ. ಶಾರದಾ ಹಾಗಲ್ಲ—ಸಮಸ್ತ ಕೆಲಸವೂ ತಾನೇ ಮಾಡುತ್ತಾಳೆ. ಮೊನ್ನೆ ನಮ್ಮ ಅಡಿಗೆ ವೆಂಕಟೇಶ ಅವರಣ್ಣನ ಮದುವೆಗೆಂದು ಹೋದವನು ಒಂದು ತಿಂಗಳಾದರೂ ಬರಲಿಲ್ಲ. ನನಗೂ ಆಗ ಮೈಯಲ್ಲಿ ಚೆನ್ನಾಗಿಲ್ಲ, ಶಾರದೆಯೇ ಎಲ್ಲ ನಿರ್ವಹಿಸಿಕೊಂಡು ಹೋದಳು.”

“ ಕಮಲಾಕ್ಷಮ್ಮನವರದೂ ದೊಡ್ಡ ಸಂಸಾರ. ಶಾರದೆಯೇ ಹಿರಿಯ ಸೊಸೆಯಾಗುತ್ತಾಳೆ. ಅತ್ತೆ ಮಾವಂದಿರನ್ನು, ಮೈದುನರು, ನಾದಿನಿಯನ್ನು ಅವಳೇ ನೋಡಿಕೊಳ್ಳಬೇಕಮ್ಮ—ಕಮಲಾಕ್ಷಮ್ಮ ನನ್ನ ಸ್ನೇಹಿತರು ಎಂದು ನಾನು ಹೇಳುತ್ತಿಲ್ಲ. ನಾವಿಬ್ಬರೂ ಅಕ್ಕತಂಗಿಯರ ಹಾಗಿದ್ದೇವೆ. ಈ ಪುಣ್ಯಾತ್ಗಿತ್ತಿ ನಿಮ್ಮ ಮಗಳಿಗೆ ತಾಯಿ ಆಗುತ್ತಾರೇ ,ವಿನಾ ,ಅತ್ತೆಯಾಗುವುದಿಲ್ಲ. ಇವರ ಯಜಮಾನರೂ ಹಾಗೆಯೇ—ಚಿನ್ನದಂಥ ಮನುಷ್ಯರು.”

“ ಪದ್ಮಾವತಮ್ಮ, ಇಲ್ಲಿ ನೋಡಿ. ನನ್ನ ಮನೆಯಲ್ಲಿ ಒಂದು ಹೆಣ್ಣು ಮಗು ಇದೆ. ಅದಕ್ಕೆ ಇಷ್ಟರಲ್ಲಿ ಮದುವೆ ಮಾಡಿ ಗಂಡನ ಮನೆಗೆ ಕಳಿಸುತ್ತೇನೆ. ನನ್ನ ಮನೆಗೆ ನನ್ನ ಸೊಸೆ ಬರುತ್ತಾಳೆ. ನಾನು ನನ್ನ ಸೊಸೆಯನ್ನು ಚೆನ್ನಾಗಿ ನೋಡಿಕೊಳ್ಳದೆ ಇತರರು ನನ್ನ ಮಗಳನ್ನು ಸರಿಯಾಗಿ ನೋಡಿಕೊಳ್ಳಲಿ ಎಂದು ಅಪೇಕ್ಷಿಸಲಾಗುತ್ತದೆಯೇ ? ನನ್ನ ಮಗ ಸೊಸೆ ಚೆನ್ನಾಗಿದ್ದರೆ ಸಾಕ್ರೀ ! ಅವರ ಪುಟ್ಟ ಸಂಸಾರ ನೋಡಿ ಸಂತೋಷಪಡುವ ಭಾಗ್ಯಕ್ಕಿಂತ ಇನ್ನೇನು ಬೇಕು ?”

“ ನಿಮ್ಮ ಹೊಟ್ಟೆ ತಣ್ಣಗಿರಲಮ್ಮ ”

ಎಂದು ಪದ್ಮಾವತಮ್ಮ ಕಳಕಳಿಯಿಂದ ನುಡಿದರು.

ಶಾರದೆಯೇ ಒಂದು ತಟ್ಟೆಯಲ್ಲಿ ನಾಲ್ಕು ಕಾಫಿ ಲೋಟಗಳನ್ನಿಟ್ಟು ಕೊಂಡು ಬಂದಳು.

“ ನಮಗೂ ಕಾಫಿ ತಂದುಬಿಟ್ಟೆಯಾ ? ”

“ ಹೂ.”

“ ಗಂಡಸರಿಗೆ ? ”

“ ವೆಂಕಟೇಶ ತೆಗೆದುಕೊಂಡು ಹೋದ.”

“ ನಿಮ್ಮ ತಂದೆ ಏನು ಮಾಡುತ್ತಿದ್ದಾರೆ.”

“ ಅವರುಗಳ ಜತೆ ಮಾತಾಡುತ್ತಿದ್ದಾರೆ.”

“ ಗಂಟೆಯೆಷ್ಟು ? ”

“ ಮೂರಕ್ಕೆ ಐದು ನಿಮಿಷ ಇದೆಯಮ್ಮ.”

“ ನೀನು ತಲೆ ಬಾಚಿಕೋ—”

ಎಲ್ಲರೂ ಕಾಫಿ ಮುಗಿಸುವವರೆಗೆ ಅಲ್ಲಿಯೇ ಇದ್ದ ಶಾರದೆ, ಲೋಟಗಳನ್ನು ತೆಗೆದುಕೊಂಡು ಒಳಗೆ ಹೋದಳು.

## ೫

ಬಿಸಿಬಿಸಿಯಾಗಿದ್ದ ಕಾಫಿಯನ್ನು ಸ್ವಲ್ಪ ಸ್ವಲ್ಪ ಸವಿಯುತ್ತಾ ಯೋಗಾ ನರಸಿಂಹಯ್ಯನವರು,

" ಕಾಫಿ ಬಲು ಚೆನ್ನಾಗಿದೆ ರಾಯರೇ " ಎಂದರು.

ಪದ್ಮನಾಭರಾಯರು ಕಾಫಿ ಮುಗಿಸಿ, ಲೋಟಾ ಕೆಳಗಿಟ್ಟು,

" ಗಂಟೆಯೆಷ್ಟು ಸ್ವಾಮಿ."

" ಮೂರು."

" ನಾನು ಹೋಗಿಬಿಟ್ಟು ಬರುತ್ತೇನೆ."

" ಆಗಬಹುದು "

ಎಂದೆದ್ದು ಹೊರಗೆ ಹೋಗಿ ಕಾರ್ ತರಲು ಡ್ರೈವರಿಗೆ ಹೇಳಿದರು.

ಶಂಕರನಾರಾಯಣರಾಯರ ಮನೆಬಿಟ್ಟು ಹೊರಟ ಪದ್ಮನಾಭರಾಯರು ನೇರವಾಗಿ ಮಹಾರಾಜಾ ಕಾಲೇಜಿಗೆ ಬಂದು ಅಧ್ಯಾಪಕರ ರೂಮ್ ಪ್ರವೇಶಿಸಿದರು.

ಅಲ್ಲಿ ಸುಬ್ಬುಕೃಷ್ಣ ಕಂಡುಬರಲಿಲ್ಲ.

ಅವರ ಬಳಿಗೆ ಬಂದ ಒಬ್ಬ ಅಧ್ಯಾಪಕರು,

" ಯಾರು ಬೇಕಾಗಿತ್ತು ಸರ್ " ಎಂದು ಕೇಳಿದರು.

" ಎಕನಾಮಿಕ್ಸ್ ಲೆಕ್ಚರರ್ ಸುಬ್ಬುಕೃಷ್ಣಯ್ಯನವರು."

" ಅವರು ಈಗ ತಾನೇ ಕ್ಲಾಸ್ ಮುಗಿಸಿಕೊಂಡು ಹಾಸ್ಟಲ್ಲಿಗೆ ಹೋದರು."

" ಹಾಸ್ಟಲ್ಲಿನಲ್ಲಿ ಅವರ ರೂಮಿನ ನಂಬರೆಷ್ಟು ? "

" ಮೂವತ್ತೆರಡು."

" ಅಲ್ಲಿಗೇ ಹೋಗುತ್ತೇನೆ."

ಎಂದು ಹೊರಬಂದು, ಕಾರಿನಲ್ಲಿ ಕುಳಿತು ಹಾಸ್ಟೆಲ್ಲಿಗೆ ಬಂದರು.

ಮೂವತ್ತೆರಡನೆಯ ನಂಬರು ರೂಮ್ ಪತ್ತೆ ಮಾಡುವುದು ಕಷ್ಟವಾಗಲಿಲ್ಲ.

ರಾಯರು ಮೆಲ್ಲನೆ ಕದತಟ್ಟಿದರು.

ಮಲಗಿದ್ದ ಸುಬ್ಬುಕೃಷ್ಣ ಎದ್ದು ಬಾಗಿಲು ತೆಗೆದು, ರಾಯರನ್ನು ನೋಡಿ ಆಶ್ಚರ್ಯದಿಂದ,

"ಯಾವಾಗ ಬಂದಿರಿ ಸ್ವಾಮಿ—ಒಳಗೆ ಬನ್ನಿ" ಎಂದ.

"ಇದೇನು ಸುಬ್ಬೂ ಮಲಗಿದ್ದೆ. ಮೈಯಲ್ಲಿ ಹುಷಾರಾಗಿದೆಯೋ ಇಲ್ಲವೋ ?"

"ಹುಷಾರಾಗಿದ್ದೇನೆ. ಒಟ್ಟಿಗೆ ಮೂರು ಕ್ಲಾಸು ತೆಗೆದುಕೊಂಡೆ, ಸ್ವಲ್ಪ ಆಯಾಸವಾಗಿತ್ತು. ಬಂದು ಮಲಗಿದೆ ಅಷ್ಟೆ—ಬಂದೆ ಸಾರ್"

ಎಂದು ಹೊರಗೆ ಹೋಗಿ ಮುಖಮಾರ್ಜನೆ ಮುಗಿಸಿಕೊಂಡು ಬಂದು ಕುಳಿತು,

"ಯಾವಾಗ ಬಂದಿರಿ ಸ್ವಾಮಿ—ಒಂದು ಕಾರ್ಡ್ ಬರೆಯಬಾರದಾಗಿತ್ತೇ—ನಾನು ಸ್ಟೇಷನ್ನಿಗೆ ಬರುತ್ತಿದ್ದೆ—ಎಲ್ಲಿ ಇಳಿದುಕೊಂಡಿರುವಿರಿ ?"

"ಲಕ್ಷ್ಮೀಪುರದಲ್ಲಿ–ಲಾಯರ್ ಶಂಕರನಾರಾಯಣರಾಯರ ಮನೆಯಲ್ಲಿ."

"ನಿಮ್ಮದೇನಾದರೂ ಕೇಸ್ ಇತ್ತೇ ?"

"ಕೇಸೂ ಇಲ್ಲ—ಏನೂ ಇಲ್ಲಯ್ಯಾ..............."

ಹಾಸ್ಟಲ್ ಅಡಿಗೆಯವನು ಎರಡು ತಿಂಡಿ ಪ್ಲೇಟುಗಳನ್ನೂ ಕಾಫಿಯನ್ನೂ ಮೇಜಿನ ಮೇಲಿಟ್ಟು ಹೋದ.

"ಈಗ್ಯಾಕೆ ತಿಂಡಿ ತರಿಸಿದೆ ಸುಬ್ಬೂ."

"ಇದು ತಿಂಡಿ ಹೊತ್ತು ಸ್ವಾಮಿ. ನೀವು ಅಪರೂಪವಾಗಿ ಬಂದಿದ್ದೀರಿ..............."

"ವಯಸ್ಸಾಯಿತಪ್ಪಾ. ಸಿಕ್ಕಿದ ವೇಳೆಯಲ್ಲಿ ತಿನ್ನುವುದಕ್ಕಾಗುವುದಿಲ್ಲ."

"ನಿಮಗೆಷ್ಟು ಬೇಕೋ ತೆಗೆದುಕೊಳ್ಳಿ ಸ್ವಾಮಿ."

ರಾಯರು ಒಂದು ಬಳ್ಳಿ ಜಿಲೇಬಿ ಬಾಯಿಗಿಟ್ಟುಕೊಂಡು ಒಂದು ಚಮಚದಷ್ಟು ಖಾರಾಬೂಂದಿ ತಿಂದು, ಸ್ವಲ್ಪ ಕಾಫಿ ಕುಡಿದರು.

ಸುಬ್ಬುಕೃಷ್ಣ ತನ್ನ ಪಾಲಿನ ತಿಂಡಿ ಮುಗಿಸಿದ.

“ಬಟ್ಟೆ ಹಾಕಿಕೋ ಸುಬ್ಬೂ—ಹೊರಗೆ ಹೋಗೋಣ.”

“ಎಲ್ಲಿಗೆ ?”

“ಹೇಳುತ್ತೇನೆ ನಡೀ—ಯೋಗಾ, ನಿಮ್ಮಮ್ಮನೂ ಬಂದಿದ್ದಾರೆ.”

“ಅಣ್ಣಾ, ಅಮ್ಮ ಬಂದಿದ್ದಾರೆಯೇ ?”

“ಹೂ.”

“ಎಲ್ಲಿದ್ದಾರೆ ?”

“ಲಕ್ಷ್ಮೀಪುರದಲ್ಲಿ !”

“ಶಂಕರನಾರಾಯಣರಾಯರ ಮನೆಯಲ್ಲೇ !”

“ಹೂ !”

“ನಿಮ್ಮ ಮಾತೇ ನನಗರ್ಥವಾಗುತ್ತಿಲ್ಲ.”

“ಅರ್ಥವಾಗುತ್ತದೆ ನಡೀ.”

ಸುಬ್ಬುಕೃಷ್ಣ ಸೂಟ್ ಧರಿಸಲು, ರಾಯರು,

“ಟೈ ಕಟ್ಟಿಕೊಳ್ಳಯ್ಯಾ—”

ರಾಯರ ಮಾತನ್ನು ಗೌರವಿಸಿ ಟೈ ಬಿಗಿದುಕೊಂಡು ಅವರೊಂದಿಗೆ ಹೊರಟ.

ದಾರಿಯಲ್ಲಿ ರಾಯರು ಸಂದರ್ಭ ವಿವರಿಸಿ,

“ಹುಡುಗಿ ಬಹಳ ಚೆನ್ನಾಗಿದೆ ಸುಬ್ಬೂ—ಒಳ್ಳೆಯ ವಂಶದ ಮಗು.”

“ಈಗಲೇ ನನಗೆ ಮದುವೆಗೆ ಏನವಸರ ಸ್ವಾಮಿ.”

“ಚೆನ್ನಾಯಿತು. ನನ್ನ ವಯಸ್ಸಾದ ಮೇಲೆ ಮದುವೆಯಾಗುತ್ತೀಯಾ ?—ನಿನಗೆ ಈಗ ಎಷ್ಟು ವಯಸ್ಸು ಎಂದು ತಿಳಿದಿದ್ದೀಯಾ ?”

“ಇಪ್ಪತ್ತುನಾಲ್ಕು.”

“ಈ ವಯಸ್ಸಿಗೆ ನಿಮ್ಮಪ್ಪನಿಗೆ ಮದುವೆಯಾಗಿ ಎರಡು ಮಕ್ಕಳಾಗಿದ್ದವು.”

“ನನಗೆ ಬರುತ್ತಿರುವುದು ನೂರ ಎಪ್ಪತ್ತೈದು ರೂಪಾಯಿ ಸಂಬಳ.”

“ಮದುವೆಯಾದಾಗ ನನಗೆ ಬರುತ್ತಿದ್ದದ್ದು ಇಪ್ಪತ್ತಮೂರು ರೂಪಾಯಿ.”

"ನಿಮ್ಮ ಕಾಲದಲ್ಲಿ ರೂಪಾಯಿಗೆ ಹದಿನೈದು ಸೇರು ಅಕ್ಕಿ ಬರುತ್ತಿತ್ತು; ಈಗ ರೂಪಾಯಿಗೆ ಮೂರು ಸೇರು ಅಕ್ಕಿ."

"ಹೌದು. ದಿನಸಿ ಧಾರಣೆ ಒಂದಕ್ಕೆ ಐದಾಗಿದೆ. ಆದರೆ ನನಗೆ ಬರುತ್ತಿದ್ದುದರ ಎಂಟುಪಟ್ಟು ನಿನಗೆ ಬರುತ್ತಿದೆಯಲ್ಲಾ!"

ಸುಬ್ಬುಕೃಷ್ಣ ನಕ್ಕು,

"ನಿಮಗೆ ಉತ್ತರ ಕೊಡಲು ನನಗೆ ಸಾಧ್ಯವೇ?—ಅಣ್ಣನೇ ಸರಿ ಅದಕ್ಕೆ?" ಎಂದ.

ಶಂಕರನಾರಾಯಣರಾಯರ ಕಾಂಪೌಂಡಿನೊಳಗೆ ಕಾರ್ ಪ್ರವೇಶಿಸಿತು.

ರಾಯರು, ಯೋಗಾನರಸಿಂಹಯ್ಯನವರು, ಕಮಲಾಕ್ಷಮ್ಮ ವೆರಾಂಡಾದಲ್ಲಿಯೇ ನಿಂತಿದ್ದರು.

ಮಗ ಕಾರಿಳಿದು ಹೋಗಿ ತಾಯಿಗೆ ನಮಸ್ಕರಿಸಿದ.

ಕಮಾಲಾಕ್ಷಮ್ಮ ಅವನ ತಲೆಯ ಮೇಲೆ ಕೈಯಿಟ್ಟು,

"ಚೆನ್ನಾಗಿದ್ದೀಯಾಪ್ಪ" ಎಂದರು.

"ಇದ್ದೇನಮ್ಮ—"

ಯೋಗಾನರಸಿಂಹಯ್ಯ ಮಗನ ಬಳಿಗೆ ಬಂದು,

"ಸುಬ್ಬೂ—ಇವರೇ ಶಂಕರನಾರಾಯಣರಾಯರು" ಎಂದರು.

ಸುಬ್ಬುಕೃಷ್ಣ ಅವರಿಗೆ ಕೈಮುಗಿದ.

ಶಂಕರನಾರಾಯಣರಾಯರು ಎಲ್ಲರನ್ನೂ ಹಜಾರಕ್ಕೆ ಆಹ್ವಾನಿಸಿದರು.

ಒಂದೆಡೆ ಹಾಕಿದ್ದ ಜಮುಖಾನದ ಮೇಲೆ ಕಮಲಾಕ್ಷಮ್ಮ, ನಾಗೂಬಾಯಿ, ಪದ್ಮಾವತಮ್ಮ, ಶಾರದಾ ಬಂದು ಕೂಡಲು ಸುಬ್ಬುಕೃಷ್ಣ ಎದ್ದು ಹೋಗಿ ನಾಗೂಬಾಯಿಯವರನ್ನು ಮಾತನಾಡಿಸಿದ.

ವೆಂಕಟೇಶ ಎಲ್ಲರಿಗೂ ತಿಂಡಿ, ಕಾಫಿ ತಂದಿತ್ತ.

ಪದ್ಮನಾಭರಾಯರು ತಿಂಡಿ ತಟ್ಟೆಯನ್ನು ನೋಡಿ,

"ಇಷ್ಟೇಕೆ ಮಾಡಿಸಿದಿರಿ. ಸ್ವಲ್ಪ ತೆಗೆದುಕೊಳ್ಳುವುದೂ ನನಗೆ ಸಾಧ್ಯವಿಲ್ಲವಾಗಿದೆ. ಸುಬ್ಬುಕೃಷ್ಣ ಬೇರೆ ಹಾಸ್ಟಲ್ಲಿನಲ್ಲಿ ತಿಂಡಿ ಕೊಡಿಸಿದ" ಎಂದರು.

ಶಂಕರನಾರಾಯಣರಾಯರು ಸೌಜನ್ಯದಿಂದ,

" ತಾವು ಸ್ವಲ್ಪವಾದರೂ ಸ್ವೀಕರಿಸಿದರೆ ನನ್ನ ಮನಸ್ಸಿಗೆ ಸಂತೋಷ ವಾಗುತ್ತದೆ " ಎಂದರು.

ಉಪಾಹಾರ ಮುಗಿದ ಮೇಲೆ ಪದ್ಮನಾಭರಾಯರು,

" ತಮ್ಮ ಮಗಳಿಗೆ ವೀಣೆ ಪಾಠವಾಗಿದೆಯೆಂದು ಹೇಳಿದಿರಿ " ಎಂದರು.

" ಶಾರದಾ, ವೀಣೆ ತೆಗೆದುಕೊಂಡು ಬಾರಮ್ಮ "

ಎಂದು ರಾಯರು ಹೇಳಲು, ಶಾರದಾ ಒಳಗೆದ್ದು ಹೋಗಿ ವೀಣೆ ತಂದು ಎದುರಿಗಿಟ್ಟುಕೊಂಡಳು.

ಶಾರದಾ ವೀಣೆಯನ್ನು ಶ್ರುತಿ ಮಾಡಿಕೊಂಡು, ಒಂದು ಮೀಟು ಹಾಕಿದ ಕೂಡಲೆ ಪದ್ಮನಾಭರಾಯರು,

" ಭಲೆ ಭಲೆ ! ಕೈ ಒಳ್ಳೇ ಪಳಗಿದೆ " ಎಂದರು.

ಕಾನಡಾ ರಾಗದಲ್ಲಿ ವರ್ಣ ನುಡಿಸಿ, ಶಾರದಾ ಪೂರ್ಣಚಂದ್ರಿಕಾರಾಗದ 'ತೆಲಿಸಿ ರಾಮ' ಕೀರ್ತನೆ ಆರಂಭಿಸಿದಳು. ದರ್ಬಾರ್, ಅಭೋಗಿ, ವರಾಳಿ ರಾಗಗಳಲ್ಲಿ ಕೀರ್ತನೆಗಳನ್ನು ನುಡಿಸಿ ಸಿಂಹೇಂದ್ರ ಮಧ್ಯಮರಾಗದಲ್ಲಿ ರಾಗ, ತಾನ, ಪಲ್ಲವಿ ನುಡಿಸಿದಳು.

ಪದ್ಮನಾಭರಾಯರ ಕಣ್ಣುಗಳಿಂದ ಆನಂದಭಾಷ್ಪಗಳುದುರಿದವು:

ಯೋಗಾನರಸಿಂಹಯ್ಯನವರು ಸಾಲಭಂಜಿಕೆಯಂತೆ ಕುಳಿತರು.

ಎರಡು ದೇವರನಾಮ, ಒಂದು ಮೀರಾ ಭಜನ್ ನುಡಿಸಿ ಶಾರದಾ ವೀಣೆ ಕೆಳಗಿಡಲು ಪದ್ಮನಾಭರಾಯರು,

" ಅಮ್ಮಯ್ಯ, ಒಂದು ತಿಲ್ಲಾನ ನುಡಿಸಮ್ಮ " ಎಂದರು.

ಶಾರದಾ ವೀಣೆಯನ್ನೆತ್ತಿಕೊಂಡು ತಿಲ್ಲಾನ ನುಡಿಸಿದಳು.

ಪದ್ಮನಾಭರಾಯರು ಆನಂದಪರವಶರಾಗಿ,

" ನೀನು ಶಾರದೆಯೂ ಶಾರದೆ ಕಣಮ್ಮ " ಎಂದರು.

ಸುಬ್ಬುಕೃಷ್ಣ ಗಡಿಯಾರ ನೋಡಿಕೊಂಡು, ತಂದೆಗೆ,

" ನಾನಿನ್ನು ಬರಲೇ ? " ಎಂದು ಕೇಳಿದ.

" ಇಲ್ಲೇ ಊಟಮಾಡಿಕೊಂಡು ಹೋಗಬಹುದಲ್ಲಾ !"

ಎಂದು ಶಂಕರನಾರಾಯಣರಾಯರು ಹೇಳಿದರು.

" ನಾಳೆ ಪಾಠದ ನೋಟ್ಸ್ ಮಾಡಬೇಕಾಗಿದೆ."

ಎಂದೆಲ್ಲರಿಗೂ ನಮಸ್ಕರಿಸಿ ಹೊರಗೆ ಬರಲು, ಕಮಲಾಕ್ಷಮ್ಮ ಅವನ ಹಿಂದೆ ಬಂದರು.

ಕಾಂಪೌಂಡಿನ ಪಕ್ಕದಲ್ಲಿ ಒಂದು ತೆಂಗಿನ ಮರದ ಕೆಳಗೆ ತಾಯಿ, ಮಗ ಹೋಗಿ ನಿಂತರು.

" ನನಗೊಂದೂ ತಿಳಿಸಲೇ ಇಲ್ಲವಲ್ಲಮ್ಮ."

" ಇದ್ದಕ್ಕಿದ್ದಂತೆ ಶಂಕರನಾರಾಯಣರಾಯರು ಬಂದರು ಸುಬ್ಬು. ನಾವು ಅವರ ಜತೆಗೇ ಹೊರಡಬೇಕಾಯಿತು."

" ನೀವು ಊರಿಗೆ ಯಾವಾಗ ಹಿಂದಿರುಗುವಿರಿ ? "

" ನಾಳೆ ಹೊರಡಲೇ ಬೇಕಪ್ಪ."

" ಬೆಳಿಗ್ಗೆ ಬರುತ್ತೇನೆ."

" ನಾಳೆ ರಜಾ ತೆಗೆದುಕೊಂಡು, ನಾವು ಹೊರಡುವವರೆಗೆ ಜತೆಯಲ್ಲಿರು."

" ನೋಡುತ್ತೇನೆ."

" ಹುಡುಗಿ ಏನು ಅನಿಸಿತೋ ? "

" ನೀನು ಹೇಳು."

" ಮದುವೆಯಾಗೋನು ನೀನು ! "

" ಜನ ಒಳ್ಳೆಯವರ ಹಾಗೆ ಕಾಣುತ್ತಾರೆ."

" ತುಂಬ ಸಂಭಾವಿತರು. ಮನೆಯಲ್ಲಿ ಲಕ್ಷ್ಮಿಯೇ ತಾಂಡವವಾಡುತ್ತಿದ್ದರೂ ಶಂಕರನಾರಾಯಣರಾಯರಿಗೆ ಸ್ವಲ್ಪವೂ ಅಹಂಕಾರವಿಲ್ಲ. ಅವರ ಹೆಂಡತಿಯೂ ಅಷ್ಟೆ—ಒಳ್ಳೆಯ ಮುತ್ತೈದೆ."

" ನೀನೂ ಅಣ್ಣ ಯೋಚನೆ ಮಾಡಿ."

" ನೀನೂ ಯೋಚನೆಮಾಡಿ ಬೆಳಿಗ್ಗೆ ನಿನ್ನ ಅಭಿಪ್ರಾಯ ತಿಳಿಸು."

ಡ್ರೈವರ್ ಕಾರನ್ನು ಹೊರಗೆ ತೆಗೆದುಕೊಂಡು ಹೋಗಿ ನಿಲ್ಲಿಸಿದ.

ತಾಯಿಯ ಅಪ್ಪಣೆ ಪಡೆದು ಸುಬ್ಬುಕೃಷ್ಣ ಕಾರಿನಲ್ಲಿ ಕುಳಿತ.

# ೬

ಬೆಳಿಗ್ಗೆ ಶಂಕರನಾರಾಯಣರಾಯರ ಮನೆಗೆ ಸುಬ್ಬುಕೃಷ್ಣ ಬರುವ ವೇಳೆಗೆ ಹತ್ತು ಹೊಡೆದಿತ್ತು.

" ಯಾಕಪ್ಪಾ ಇಷ್ಟು ಹೊತ್ತು ? "

ಎಂದು ಕಮಲಾಕ್ಷಮ್ಮ ಕೇಳಿದರು.

" ರಜಾ ತೆಗೆದುಕೊಂಡು ಬರುವುದಕ್ಕೆ ಹೊತ್ತಾಯಿತಮ್ಮ."

" ಬಾ "

ಎಂದು ಯೋಗಾನರಸಿಂಹಯ್ಯನವರು, ಪದ್ಮನಾಭರಾಯರು ಇಳಿದಿದ್ದ ರೂಮಿಗೆ ಕರೆದೊಯ್ದರು.

ಪದ್ಮನಾಭರಾಯರು ಸುಬ್ಬುಕೃಷ್ಣನನ್ನು ಹತ್ತಿರ ಕೂಡಿಸಿಕೊಂಡು,

" ನಾವು ಹೊರಡುವ ವೇಳೆಗೆ ಶಂಕರನಾರಾಯಣರಾಯರಿಗೆ ನಮ್ಮ ಅಭಿಪ್ರಾಯ ತಿಳಿಸಬೇಕು ಸುಬ್ಬೂ."

"......................................................................"

" ನಿನ್ನ ಮನಸ್ಸಿನಲ್ಲೇನಿದೆ ?—ಸ್ಪಷ್ಟವಾಗಿ ಹೇಳು."

" ದೊಡ್ಡವರು ನೀವುಗಳೆಲ್ಲಾ ಇದ್ದೀರಿ. ನೀವು ನಿಶ್ಚಯಿಸಿದಂತೆ ನಡೆದುಕೊಳ್ಳಲು ನಾನು ಸಿದ್ಧನಾಗಿದ್ದೇನೆ."

" ಏನಮ್ಮಾ—ಕಮಲಾಕ್ಷಮ್ಮನವರೇ, ಈ ವಿಷಯ ನಿರ್ಧರಿಸಲು ನನಗೆ ಅಧಿಕಾರ ಕೊಡುತ್ತೀರೋ ? "

" ನಾವು ಹೊಸದಾಗಿ ನಿಮಗೆ ಅಧಿಕಾರ ಕೊಡಬೇಕೇ ಪದ್ಮನಾಭ ರಾಯರೇ ? ಸುಬ್ಬು ಯೋಗಕ್ಷೇಮ ನಮಗೆಷ್ಟು ಸೇರಿದ್ದೋ ನಿಮಗೂ ಅಷ್ಟೇ ಸೇರಿದ್ದು."

" ಏನಯ್ಯಾ—ಯೋಗಾನರಸಿಂಹಯ್ಯ—ನಿನ್ನ ಅಭಿಪ್ರಾಯವೇನು ?"

ಯೋಗಾನರಸಿಂಹಯ್ಯ ಸುಮ್ಮನಿರಲು

" ಹೇಳೋ—ಸುಮ್ಮನೆ ಪಂಚಾಯ್ತಿ ಮಾಡಬೇಡ—"

ಎಂದು ತಾವೇ ಸ್ವಾತಂತ್ರ್ಯ ವಹಿಸಿ,

" ಸುಬ್ಬು ಒಪ್ಪಿದ್ದಾನೆಯೆಂದು ನಿಮ್ಮ ಬೀಗಿತ್ತಿಯವರಿಗೆ ತಿಳಿಸಿಬಿಡಿಯಮ್ಮ."

ಕಮಲಾಕ್ಷಮ್ಮನವರು ಸುಬ್ಬುಕೃಷ್ಣನನ್ನು ನೋಡಲು ಅವನು ಸಮ್ಮತಿ ವ್ಯಕ್ತಪಡಿಸುವಂತೆ ತಲೆಯಳ್ಳಾಡಿಸಿದ.

ಕಮಲಾಕ್ಷಮ್ಮನವರು ಒಳಗೆ ಹೋಗಲು, ಶಂಕರನಾರಾಯಣರಾಯರು ಬಂದು ಕೈಜೋಡಿಸಿ,

" ಸ್ವಾಮಿ, ನನ್ನ ಮನಸ್ಸಿನಿಂದ ದೊಡ್ಡ ಭಾರ ಇಳುಹಿ ಉಪಕಾರ ಮಾಡಿರುವಿರಿ " ಎಂದರು.

" ಲಗ್ನಪತ್ರಿಕೆ ಯಾವಾಗ ಇಟ್ಟುಕೊಳ್ಳುತ್ತೀರಿ ? "

" ತಾವುಗಳೆಲ್ಲಾ ಒಪ್ಪಿದರೆ ಇಂದೇ ಇಟ್ಟುಕೊಳ್ಳಬಹುದು."

" ಹಾಗೇ ಮಾಡಲಿ ಯೋಗಾ—ಇವತ್ತು ಲಗ್ನಪತ್ರಿಕೆ ಮುಗಿಸಿಕೊಂಡೇ ನಾವು ನಾಳೆ ಬೆಳಿಗ್ಗೆ ಪ್ರಯಾಣ ಮಾಡೋಣ "

" ರಾಯರಿಗೆ ಹೇಗೆ ಅನುಕೂಲವೋ ಹಾಗೆ ಮಾಡಲಿ "

ಎಂದು ಯೋಗಾನರಸಿಂಹಯ್ಯ ಹೇಳಿ ಹೊರಗೆ ಬಂದು ಹೆಂಡತಿಯನ್ನು ಕರೆದು,

" ಇವತ್ತೇ ಲಗ್ನಪತ್ರಿಕೆ ಇಟ್ಟುಕೊಳ್ಳುತ್ತಾರಂತೆ ! " ಎಂದರು.

" ಇಟ್ಟುಕೊಳ್ಳಲಿ."

" ನಾವು ಮಂಗಳದ್ರವ್ಯ ತರಬೇಡವೇ ? "

" ತರಬೇಕು—ಹಾಗೇ ಎರಡು ಕಣವೂ ಬೇಕು."

" ಪೇಟೆಗೆ ಯಾವಾಗ ಹೋಗಿ ಬರೋಣ."

" ಹೇಳು ಯಾವಾಗ ಹೋಗಬೇಕು ? "

" ಈಗಿನ್ನೂ ಹನ್ನೊಂದು ಗಂಟೆ. ನಾನೂ ನಾಗೂಬಾಯಿ, ಸುಬ್ಬೂನ ಕರೆದುಕೊಂಡು ಪೇಟೆಗೆ ಹೋಗಿಬರುತ್ತೇವೆ."

" ಆಗಬಹುದು " ಎಂದರು.

ಕಮಲಾಕ್ಷಮ್ಮ, ನಾಗೂಬಾಯಿ, ಸುಬ್ಬುಕೃಷ್ಣ ಹೊರಟು ನಿಲ್ಲಲು, ಅವರು, ಒಲ್ಲೆನೆಂದರೂ ಕೇಳದೆ, ಶಂಕರನಾರಾಯಣರಾಯರು,

" ಕಾರ್ ತೆಗೆದುಕೊಂಡು ಹೋಗಿ " ಎಂದರು.

ಸಂಜೆಯ ಸಮಾರಂಭಕ್ಕೆ ಶಂಕರನಾರಾಯಣರಾಯರು ಸಾಲ್ಕಾರು ಮಿತ್ರರನ್ನು ಆಹ್ವಾನಿಸಿದರು.

ಅವರ ಕುಲಪುರೋಹಿತರಾದ ವಾಸುದೇವಭಟ್ಟರು, ಲಗ್ನಪತ್ರಿಕೆಗಳನ್ನು ಬರೆದಿಟ್ಟರು. ಆಶ್ವಯುಜ ಮಾಸದಲ್ಲಿ ಲಗ್ನವೆಂದು ನಿಶ್ಚಯವಾಯಿತು.

ಲಗ್ನಪತ್ರಿಕೆಗಳ ವಿನಿಮಯವಾದ ಮೇಲೆ ಸಕಲರಿಗೂ ಸುಗ್ರಾಸ ಭೋಜನವಾಯಿತು.

ಅತಿಥಿಗಳಿಗೆ ತಾಂಬೂಲವಿತ್ತು ಕಳಿಸಿದ ಮೇಲೆ ರಾಯರು, ಯೋಗಾ ನರಸಿಂಹಯ್ಯನವರ ಬಳಿಗೆ ಬಂದು,

" ಎಲ್ಲಾ ಕೆಲಸಗಳನ್ನೂ ಹೂವೆತ್ತಿದಂತೆ ನಡಸಿಕೊಟ್ಟಿರುವಿರಿ."

" ಮನಸ್ಸಿನಂತೆ ಮಾದೇವ ರಾಯರೇ."

" ಅಳಿಯಂದಿರು ಹಾಸ್ಟಲ್ಲಿನಲ್ಲಿ ಇದ್ದಾರಂತೆ ! "

" ಹೌದು."

" ಇಲ್ಲಿಗೇ ಬಂದು ಅವರೇಕೆ ಇರಬಾರದು."

" ಅದಕ್ಕೂ ಕಾಲಬರುತ್ತದೆ. ಅಲ್ಲಿಯವರೆಗೆ ಸುಬ್ಬುಕೃಷ್ಣ ಹಾಸ್ಟಲ್ಲಿನಲ್ಲೇ ಇರಲಿ."

" ತಮ್ಮ ಚಿತ್ತ."

" ನಾವು ನಾಳೆ ಬೆಳಿಗ್ಗೆ ರೈಲಿನಲ್ಲಿ ಪ್ರಯಾಣಮಾಡುತ್ತೇವೆ."

" ರೈಲು ಬೇಡ—ನನ್ನ ಕಾರಿನಲ್ಲಿ ಪ್ರಯಾಣಬೆಳಸಿ."

" ವೃಥಾ ಏಕೆ ಖರ್ಚು ಮಾಡಬೇಕು—ಕಾರು ಬೆಂಗಳೂರಿನಿಂದ ಖಾಲಿ ಬರಬೇಕಾಗುತ್ತದೆ."

" ಚಿಂತೆಯಿಲ್ಲ—ತಾವು ದಯೆಯಿಟ್ಟು ಕಾರಿನಲ್ಲೇ ಪ್ರಯಾಣಬೆಳಸ ಬೇಕು."

ಯೋಗಾನರಸಿಂಹಯ್ಯನವರು ನಿರ್ವಾಹವಿಲ್ಲದೆ ಒಪ್ಪಬೇಕಾಯಿತು.

3

ಬೆಳಗ್ಗೆ ಎಲ್ಲರೂ ಸುಪ್ರಸನ್ನರಾಗಿ, ಹೊರಡಲನುವಾದರು.

ಪದ್ಮಾವತಮ್ಮ ಬೀಗಿತ್ತಿಗೂ, ನಾಗೂಬಾಯಿಯವರಿಗೂ ಅರಿಶಿನ ಕುಂಕುಮ ತಾಂಬೂಲವಿತ್ತರು.

ಶಂಕರನಾರಾಯಣರಾಯರು ವಿಶ್ವಾಸಪೂರ್ವಕವಾಗಿ ಪದ್ಮನಾಭರಾಯರ ಕೈಗಳನ್ನು ಹಿಡಿದು,

" ತಾವು ದಯೆಮಾಡಿಸಿ ನನಗೆ ಮಹೋಪಕಾರಮಾಡಿರುವಿರಿ. ತಾವೇ ಮುಂದೆ ನಿಂತುಕೊಂಡು ಮದುವೆಯನ್ನೂ ಸಾಂಗವಾಗಿ ನಡಸಿಕೊಡಬೇಕು" ಎಂದರು.

ಎಲ್ಲರೂ ವೆರಾಂಡಕ್ಕೆ ಬರಲು, ಪದ್ಮಾವತಮ್ಮ ಮಗಳನ್ನು ಕರೆದು ಹಿರಿಯರಿಗೆ ನಮಸ್ಕರಿಸೆಂದರು.

ಶಾರದಾ ಎಲ್ಲರಿಗೂ ನಮಸ್ಕರಿಸಿದಳು.

ಸುಬ್ಬುಕೃಷ್ಣನೂ ಎಲ್ಲರೊಂದಿಗೆ ಹೊರಟ.

ಹಾಸ್ಟಲ್ ಬಳಿ ಅವನು ಇಳಿಯಲು, ನಾಗೂಬಾಯಿ ಅವನನ್ನು ಹತ್ತಿರ ಕರೆದು,

" ನಿಮ್ಮ ಮಾವನವರ ಮನೆಗೆ ಆಗಾಗ್ಗೆ ಹೋಗಿ, ಶಾರದನನ್ನು ಮಾತನಾಡಿಸಿಕೊಂಡು ಬಾ."

" ಆಗಲಿ ಚಿಕ್ಕಮ್ಮ " ಎಂದ.

ಕಾರು ಬೆಂಗಳೂರಿನತ್ತ ಧಾವಿಸಿತು.

## ೭

ಸುಬ್ಬುಕೃಷ್ಣ ಮೂರು ದಿನಗಳು ಲಕ್ಷ್ಮೀಪುರದತ್ತ ಹೋಗಲಿಲ್ಲ.

ಶಾರದೆಯ ರೂಪ, ಧ್ವನಿ ಅವನನ್ನು ಎಷ್ಟು ಆಕರ್ಷಿಸುತ್ತಿದ್ದರೂ ಮನಸ್ಸನ್ನು ಬಿಗಿಹಿಡಿದ.

ನಾಲ್ಕನೆಯ ದಿನ ತನ್ನೊಂದಿಗೇ ವಾದಕ್ಕಾರಂಭಿಸಿದ.

'ನನ್ನ ಮಾವನಮನೆಗೆ ಹೋಗಿ, ನನ್ನ ಹೆಂಡತಿಯನ್ನು ನೋಡುವುದರಲ್ಲಿ ಏನು ತಪ್ಪು.

'ತಪ್ಪೇನಿಲ್ಲ. ಇವನು 'ಮಹಾ ಖಯಾಲಿ' ಎಂದು ಅವರು ಆಡಿಕೊಳ್ಳುತ್ತಾರೆ.'

'ಅವರು ಆಡಿಕೊಳ್ಳುವ ಜನರಲ್ಲ—ಬಹಳ ಗಂಭೀರಸ್ಥರು!'

ಎಂದು ನಿರ್ಧರಿಸಿಕೊಂಡು ಲಕ್ಷ್ಮೀಪುರಕ್ಕೆ ಬಂದ.

ಮಾಲಿ ಗಿಡಗಳಿಗೆ ನೀರು ಹಾಕುತ್ತಿದ್ದುದನ್ನು ನೋಡುತ್ತ ನಿಂತಿದ್ದ ಶಾರದೆ, ಸುಬ್ಬುಕೃಷ್ಣನ ಮುಖ ಕಂಡೊಡನೆಯೇ ಒಳಗೆ ಓಡಿಹೋಗಿ ತಾಯಿಗೆ,

"ಅವರು ಬರುತ್ತಿದ್ದಾರಮ್ಮ" ಎಂದಳು.

"ಅವರು ಎಂದರೆ ಯಾರೇ?"

"ನಿನ್ನ ಅಳಿಯಂದಿರು."

"ಹೋಗಿ—ಮಾತನಾಡಿಸು."

"ಊಹೂ. ನನಗೆ ಸಂಕೋಚವಾಗುತ್ತದೆ."

"ನಾನು ಮಾತನಾಡಿಸುತ್ತಿರುತ್ತೇನೆ. ನೀನು ಕಾಫಿ, ತಿಂಡಿ ತಂದು ಕೊಡು"

ಎಂದು ಹೊರಗೆ ಬಂದು ಸುಬ್ಬುಕೃಷ್ಣನನ್ನು ನೋಡಿ,

'ಒಳಗೆ ಬನ್ನಿ' ಎಂದರು.

ಸುಬ್ಬುಕೃಷ್ಣ ಬಂದು ಹಜಾರದಲ್ಲಿ ಕುಳಿತ.

ಧಾರಾಳವಾಗಿ ಅವನನ್ನು ಮಾತನಾಡಿಸಲು ಪದ್ಮಾವತಮ್ಮನವರಿಗೆ ನಾಚಿಕೆ; ಅವರನ್ನು ಮಾತನಾಡಿಸಲು ಸುಬ್ಬುಕೃಷ್ಣನಿಗೆ ಸಂಕೋಚ.

ಸುಬ್ಬುಕೃಷ್ಣನೇ ಧೈರ್ಯ ತಂದುಕೊಂಡು,

"ಯಜಮಾನರು ಮನೆಗೆ ಬಂದಿಲ್ಲವೇ?" ಎಂದು ಕೇಳಿದ.

"ಬಂದಿದ್ದರು—ಆಫೀಸಿಗೆ ಹೋಗಿದ್ದಾರೆ. ನಿಮ್ಮ ತಂದೆಯವರು ಕಾಗದ ಬರೆದಿದ್ದರೇ?"

"ಇಲ್ಲ."

"ಲಗ್ನಪತ್ರಿಕೆಯಾದ ಮೇಲೆ ನೀವು ಇಲ್ಲಿಗೆ ಬರಲೇ ಇಲ್ಲ."

"ಬರಲಾಗಲಿಲ್ಲರಮ್ಮ."

"ನಾಳೆ ಹಾಸ್ಟಲಿಗೆ ಹೋಗಿ ನಿಮ್ಮನ್ನು ನೋಡಿಕೊಂಡು ಬರುತ್ತೇನೆ ಎಂದು ಅವರು ಅಂದರು."

"ಅವರಿಗೇಕೆ ತೊಂದರೆ?"

"ನೀವು ಸಂಕೋಚಪಟ್ಟುಕೊಳ್ಳಬೇಡಿ. ಇದೂ ನಿಮ್ಮ ಮನೆ. ದಿನಕ್ಕೆ ಒಂದು ಸಲವಾದರೂ ಬಂದು ಹೋಗಿ."

ಶಾರದೆ ಹೊರಗೆ ಬರಲಿಲ್ಲ.

ವೆಂಕಟೇಶನೇ ಕಾಫಿ, ತಿಂಡಿ ತಂದು ಸುಬ್ಬುಕೃಷ್ಣನ ಮುಂದಿಟ್ಟ.

ಪದ್ಮಾವತಮ್ಮನವರು ಒಳಗೆ ಹೋಗಿ,

"ನೀನು ತಿಂಡಿ ತೆಗೆದುಕೊಂಡು ಬಾರೆಂದರೆ ವೆಂಕಟೇಶನ ಕೈಯಲ್ಲಿ ಕಳಿಸುವುದೇ?"

"ನನಗೆ ನಾಚಿಕೆ."

"ಒಳ್ಳೇ ನಾಚಿಕೆ ಕಣೇ. ನಿನ್ನ ಗಂಡನ ಜತೆ ನೀನು ಮಾತನಾಡುವುದಕ್ಕೆ ನಾಚಿಕೆಯೇ?"

"ಬೇರೆ ಸೀರೆ ಉಟ್ಟುಕೊಂಡು ಬರುತ್ತೇನೆ."

"ಬೇಗ ಬಾ—ಶಾರದಾ,........"

" ಏನಮ್ಮ ? "

" ಅವರನ್ನು ಆಫೀಸಿನಲ್ಲಿ ಬಿಟ್ಟು ಸಿದ್ದಪ್ಪಾಜಿ ಬಂದನೇ ? "

" ಆಗಲೇ ಬಂದನಲ್ಲ."

" ನೀನೂ ಅಳಿಯಮಯ್ಯ ಕಾರು ತೆಗೆದುಕೊಂಡು ಎಲ್ಲಿಗಾದರೂ ಹೋಗಿ ಬನ್ನಿ."

" ಎಲ್ಲಿಗೆ ? "

" ಕಟ್ಟೆಗೆ ಹೋಗಿಬನ್ನಿ."

" ..................................................... "

" ಇಷ್ಟು ನಾಚಿಕೆ, ಸಂಕೋಚಪಟ್ಟುಕೊಂಡರೆ ಆಗಲ್ಲಮ್ಮ. ಅಳಿಯಮಯ್ಯ ಬೇಸರಪಟ್ಟುಕೊಂಡು ಹೊರಟುಹೋದರೆ ಏನು ಮಾಡುವುದು ? "

" ಹೋಗುತ್ತೇನಮ್ಮ."

ಪದ್ಮಾವತಮ್ಮ ಹೊರಗೆ ಬಂದು, ಕಾಫಿ, ತಿಂಡಿ ಹಾಗೆಯೇ ಕುಳಿತಿದ್ದು ದನ್ನು ಕಂಡು,

" ಏನೂ ತೆಗೆದುಕೊಳ್ಳಲಿಲ್ಲವಲ್ಲ ! "

" ಈಗ ತಾನೆ ಕಾಫಿ, ತಿಂಡಿ ಮುಗಿಸಿಕೊಂಡು ಬಂದೆ."

" ಸ್ವಲ್ಪ ತೆಗೆದುಕೊಳ್ಳಿ."

ಅತ್ತೆಮ್ಮನವರಿಗೆ ಅಸಮಾಧಾನವಾಗಬಾರದೆಂದು ಕೈಗೊಂದು ಚಕ್ಕುಲಿ ಎತ್ತಿಕೊಂಡ.

" ಕಾಲೇಜಿನಲ್ಲಿ ತುಂಬ ಕೆಲಸವೇ ? "

" ಏನಿಲ್ಲಮ್ಮ. ದಿನಕ್ಕೆ ೨-೩ ಪೀರಿಯಡ್‌ಗಳಿರುತ್ತವೆ. ನಾನು ಇದೇ ವರ್ಷ ಕೆಲಸಕ್ಕೆ ಸೇರಿರುವುದರಿಂದ ಪೂರ್ವಸಿದ್ಧತೆ ಮಾಡಿಕೊಳ್ಳಬೇಕಾಗುತ್ತದೆ."

ಶಾರದೆ ಮೆಲ್ಲನೆ ಬಂದು ತಾಯಿಯ ಬಳಿ ನಿಂತಳು.

ಆ ಸಮಯ ಸಾಧಿಸಿದ ಪದ್ಮಾವತಮ್ಮನವರು,

" ನೀನೂ ಅಳಿಯಮಯ್ಯ ಎಲ್ಲಿಗಾದರೂ ಹೋಗಿಬನ್ನಿ — ಸಿದ್ದಪ್ಪಾಜಿ ಬಂದಿದ್ದಾನೆ "

ಎಂದು ಹೇಳಿ ಒಳಗೆ ಹೊರಟುಹೋದರು.

ಶಾರದೆ ನಿಂತಲ್ಲಿಯೇ ನಿಂತಿರಲು,

" ಇಲ್ಲಿಯೆ ಬಾ ಶಾರದಾ " ಎಂದ.

ಶಾರದಾ ಅನುಮಾನಿಸಿ ಮೆಲ್ಲನೆ ಹೋಗಿ, ಅವನ ಮುಂದೆ ನಿಂತಳು.

" ಕುಳಿತುಕೋ."

ಅವಳು ಕುಳಿತುಕೊಳ್ಳಲು ಅವಳ ಕೈಗೊಂದು ಕೋಡಬಳೆಯಿತ್ತ.

" ನೀವು ತೆಗೆದುಕೊಳ್ಳಿ."

" ಜತೆಯಲ್ಲಿ ನೀನೂ ತೆಗೆದುಕೊಂಡರೆ..............."

ಕೋಡಬಳೆ ಮುರಿದು, ಒಂದು ಚೂರು ಬಾಯಿಗೆ ಹಾಕಿಕೊಂಡಳು.

" ನೀನು ಡಿಗ್ರಿ ಯಾವ ವರ್ಷ ತೆಗೆದುಕೊಂಡೆ."

" ಕಳೆದ ವರ್ಷ."

" ಆಪ್‌ಷನಲ್ಸ್ (Optionals) "

" ಇಂಗ್ಲಿಷ್ ಸಾಹಿತ್ಯ."

" ಎಂ.ಎ.ಗೆ ಏಕೆ ಹೋಗಲಿಲ್ಲ."

" ಅಮ್ಮ ಸಾಕು ಎಂದರು."

ಪೋರ್ಟಿಕೋದಲ್ಲಿ (Portico) ಕಾರು ಬಂದು ನಿಂತ ಶಬ್ದವಾಯಿತು.

" ಎಲ್ಲಿಗೆ ಹೋಗೋಣ—"

" ............................................. "

" ಬೆಟ್ಟಕ್ಕೆ ಹೋಗಿಬರೋಣವೇ ? "

" ಬೇಡ—ಕಟ್ಟೆಗೆ ಹೋಗೋಣ."

ಸುಬ್ಬುಕೃಷ್ಣ ಕಾಫಿ ಮುಗಿಸಿ ಮೇಲಕ್ಕೇಳಲು,

" ಅಮ್ಮನಿಗೆ ಹೇಳಿಬರುತ್ತೇನೆ "

ಎಂದು ಒಳಗೆ ಹೋಗಿ, ಒಂದೆರಡು ನಿಮಿಷಗಳಲ್ಲಿಯೇ ಹೊರಗೆ ಬಂದಳು.

ಪದ್ಮಾವತಮ್ಮನವರೂ ಅವಳ ಹಿಂದೆ ಬಂದರು.

ಇಬ್ಬರೂ ಕಾರಿನಲ್ಲಿ ಕುಳಿತರು.

ಕಾರು ಮುಂದಡಿಯಿಡಲು ಪದ್ಮಾವತಮ್ಮನವರ ಕಣ್ಣುಗಳಲ್ಲಿ ಆನಂದ ಭಾಷ್ಪಗಳುದುರಿದವು.

' ನನ್ನ ಮಗಳು—ಅಳಿಯ ಲಕ್ಷ್ಮೀನಾರಾಯಣರಿದ್ದ ಹಾಗಿದ್ದಾರೆ '

ಎಂದುಕೊಂಡರು.

ಕಾರು 'ಬೃಂದಾವನ'ದ ದಾರಿಯಲ್ಲಿ ಸಾಗಿತು.

"ನೀನು ವೀಣೆ ಬಹಳ ಚೆನ್ನಾಗಿ ನುಡಿಸುತ್ತಿ ಶಾರದಾ."

"..............................................."

"ಪದ್ಮನಾಭರಾಯರ ಆನಂದಕ್ಕೆ ಪಾರವೇ ಇಲ್ಲ. ಬಾಯಿ ಹಾಡುಗಾರಿಕೆ ಕಲಿತಿಲ್ಲವೇ?"

"ಕಲಿತಿದ್ದೇನೆ. ಚಿಕ್ಕರಾಮುರಾಯರೇ ನನಗೆ ಪಾಠ ಹೇಳಿದ್ದಾರೆ."

"ಅವತ್ತೇಕೆ ಹಾಡಲಿಲ್ಲ."

"ಸಂಕೋಚವಾಯಿತು."

"ನಾಳೆ ಸಂಜೆ ಬರುತ್ತೇನೆ—ನೀನು ಹಾಡಬೇಕು."

"ನೀವು ಮೂರು ದಿವಸಗಳಿಂದ ನಮ್ಮ ಮನೆ ಕಡೆ ಏಕೆ ಬರಲಿಲ್ಲ!"

"ಬರಬೇಕೆಂದು ಆಸೆಯಿತ್ತು—ಇವನು 'ಶುದ್ಧ ಖಯಾಲಿ' ಎಂದು ನೀವೆಲ್ಲಿ ತಿಳಿದುಕೊಳ್ಳುವಿರೋ ಎಂದು ಬರಲಿಲ್ಲ."

ಶಾರದಾ ಮೃದುವಾಗಿ ನಕ್ಕಳು.

"ನಿನ್ನ ತಂದೆ ತಾಯಿ ನಿನ್ನನ್ನು ತುಂಬ ಪ್ರೀತಿಸುತ್ತಾರೆ."

"ಹೌದು—ಮನೆಗೆ ಬಂದ ಕೂಡಲೆ ನನ್ನ ಮುಖ ಕಾಣದಿದ್ದರೆ ಅಣ್ಣನಿಗೆ ತಳಮಳವಾಗುತ್ತದೆ."

"ನಿಮ್ಮ ತಂದೆಯವರ ಸೌಜನ್ಯ, ಸದ್ಗುಣ ಕಂಡು ನಮ್ಮ ತಂದೆ, ಪದ್ಮನಾಭರಾಯರು ಬಹಳ ಸಂತೋಷಪಟ್ಟರು."

"ಪದ್ಮನಾಭರಾಯರು ಯಾರು? ಅವರ ಹೆಂಡತಿಯನ್ನು ನೀವು ಅವತ್ತು 'ಚಿಕ್ಕಮ್ಮ' ಎಂದು ಕರೆದಿರಿ.

"ರಾಯರು ನಮ್ಮ ತಂದೆಯವರ ಬಾಲ್ಯಸ್ನೇಹಿತರು. ಅಣ್ಣತಮ್ಮಂದಿರು ಕೂಡ ಅವರಂತೆ ಅನ್ಯೋನ್ಯವಾಗಿರಲು ಸಾಧ್ಯವಿಲ್ಲ. ಇನ್ನೊಂದು ವಿಶೇಷ ಹೇಳುತ್ತೇನೆ ಕೇಳು— ಅಣ್ಣ, ರಾಯರ ಅಭಿಪ್ರಾಯಗಳು ಉತ್ತರಧೃವ ದಕ್ಷಿಣಧೃವಗಳಂತಿವೆ. ಸದಾಕಾಲ ಇಬ್ಬರೂ ವಾದ ಮಾಡಿದ್ದೇ ಮಾಡಿದ್ದು. ಆದರೂ ಒಬ್ಬರನ್ನು ಬಿಟ್ಟು ಒಬ್ಬರಿರುವುದಿಲ್ಲ."

" ಅದೇ ನಿಜವಾದ ಸ್ನೇಹ—ನಿಮ್ಮ ತಾಯಿಯವರಿಗೆ ನಾನು ಈಗಾಗಲೇ ಅಚ್ಚುಮೆಚ್ಚಿನವಳಾಗಿದ್ದೇನೆ. ಲಗ್ನಪತ್ರಿಕೆಯ ದಿವಸ ನನ್ನನ್ನು ಒಳಗೆ ಕರೆದೊಯ್ದು ಉಪ್ಪು ಮೆಣಸಿನಕಾಯಿ ಹಾಕಿ 'ಯಾವ ಕೆಟ್ಟ ಕಣ್ಣೂ ನನ್ನ ಬಂಗಾರದ ಸೊಸೆಗೆ ತಾಕದಿರಲಿ ಭಗವಂತಾ' ಎಂದರು. ನನ್ನನ್ನು ಎಷ್ಟು ಮುಟ್ಟಿದರೂ ಅವರಿಗೆ ಸಾಲದು. ಅದನ್ನು ಕಂಡ ನಮ್ಮಮ್ಮ 'ಶಾರಿ, ನೀನು ಬಲು ಪುಣ್ಯವಂತೆ ಕಣೇ. ಇಂಥ ಅತ್ತೆ ಸಿಕ್ಕಬೇಕಾದರೆ ನೀನು ಕಳೆದ ಜನ್ಮದಲ್ಲಿ ಲಕ್ಷ ಸಂಪಿಗೆ ಹೂವಿನ ಪೂಜೆ ಮಾಡಿದ್ದೆ' ಎಂದರು."

" ನೀನು ಪೂಜೆ ಪುರಸ್ಕಾರ ಮಾಡುತ್ತೀಯಾ ? "

" ಮಾಡುತ್ತೇನೆ."

" ನಮ್ಮಮ್ಮನೂ ಪೂಜಾದುರಂಧರೆ."

" ನನಗೂ ಅವರಿಗೂ ಕೂಡುತ್ತದೆ."

" ಕೂಡಲೇಬೇಕಲ್ಲ..................."

" ಕಾಲೇಜಿನ ಟ್ಯೂಷನ್ ವರ್ಕ್ (Tuition Work) ಇಂಟರೆಸ್ಟಿಂಗಾಗಿದೆಯೇ (Interesting) ? "

" ಇಲ್ಲ—ತಲೆಚಿಟ್ಟು ಹಿಡಿದುಹೋಗುತ್ತದೆ. ಕಾಲೇಜಿಗೆ ಎಂಥ ರತ್ನಗಳು ಬರುತ್ತಿವೆ ಎಂದು ತಿಳಿದಿದ್ದೀ! ವಿದ್ಯಾರ್ಥಿಗಳಿಗೆ ವಿದ್ಯೆ ಬೇಕಿಲ್ಲ—ಬರೀ ಡಿಗ್ರಿ ಬೇಕು ಅಷ್ಟೆ ! "

" ಹಾಗಾದರೆ ನಮ್ಮ ಕಾಲೇಜೇ ವಾಸಿ."

" ಸಾವಿರ ಪಾಲು. ಹುಡುಗಿಯರು ಕಷ್ಟಪಟ್ಟು ಓದುತ್ತಾರೆ."

" ಅವರಿಗೂ ವಿಪರೀತ ಸಿನಿಮಾ ಹುಚ್ಚು."

" ನೀನು ಸಿನೀಮಾ ನೋಡುವುದಿಲ್ಲವೇ ? "

" ನೋಡುತ್ತೇನೆ. ಒಳ್ಳೆಯ ಇಂಗ್ಲಿಷ್ ಪಿಕ್ಚರ್ ಬಂದರೆ ಅಣ್ಣನೇ ಕರೆದುಕೊಂಡು ಹೋಗುತ್ತಾರೆ. ಭಕ್ತಿರಸಪ್ರಧಾನವಾದ ನಮ್ಮ ಚಿತ್ರಗಳು ಬಂದರೆ ನಾನು ಅಮ್ಮನ ಜತೆ ಹೋಗಬೇಕಾಗುತ್ತದೆ."

ಇಬ್ಬರೂ ಸ್ವಲ್ಪ ಹೊತ್ತು ಮೌನ ತಳೆದರು.

ಕಾರು ಎಡಕ್ಕೆ ತಿರುಗಲು, ಶಾರದಾ ಥಟ್ಟನೆ,

" ನೀವು ಇನ್ನೆಷ್ಟು ವರ್ಷಕ್ಕೆ ಪ್ರೊಫೆಸರ್ ಆಗುವುದು."

ಎಂದು ಕೇಳಿದಳು.

" ಪ್ರೊಫೆಸರ್ ಆಗುವವರೆಗೆ ನಾನು ಕಾಲೇಜಿನಲ್ಲಿ ಇರುವುದಿಲ್ಲ."

" ಎಲ್ಲಿಗೆ ಹೋಗುತ್ತೀರಿ."

" ಅದು ನನ್ನ ಗುಟ್ಟು."

" ನನಗೆ ಹೇಳಬಾರದೇ ? "

" ಈ ವರ್ಷ ಎಂ.ಸಿ.ಎಸ್. (M C.S.) ಪರೀಕ್ಷೆ ಇಡುತ್ತಾರಂತೆ, ಅದಕ್ಕೆ ಸ್ಪರ್ಧಿಸಬೇಕೆಂದಿದ್ದೇನೆ."

" ಸ್ಪರ್ಧೆಯಲ್ಲಿ ನೀವು ಜಯಗಳಿಸಿದರೆ.........."

" ಅಸಿಸ್ಟೆಂಟ್ ಕಮಿಾಷನರ್ ಆಗುತ್ತೇನೆ."

" ಹಾಗಾದರೆ ಎಷ್ಟು ಚೆನ್ನ."

" ಲಗ್ನಪತ್ರಿಕೆಯಾದ ಮೇಲೆ ಅಸಿಸ್ಟೆಂಟ್ ಕಮಿಾಷನರ್ ಆಗುವ ಹಂಬಲ ಹೆಚ್ಚಿತು."

" ಏಕೆ ? "

" ತಂದೆಯ ಮನೆಯಲ್ಲಿ ನೀನು ಅನುಭವಿಸುತ್ತಿರುವ ವೈಭವ ಮುಂದುವರಿಸಲು ಅನುಕೂಲವಾಗುತ್ತದೆ."

" ನೀವು ಬಹಳ ದೂರದೃಷ್ಟಿಯುಳ್ಳವರು ! "

" ನೀನು ಎಂದಿಗೂ ಅಸುಖಿಯಾಗಬಾರದು—ನಿನ್ನ ಸುಖವೇ ನನ್ನ ಸುಖವಲ್ಲವೇ ? "

" ಹಾಗಲ್ಲ–ನಿಮ್ಮ ಸುಖವೇ ನನ್ನ ಸುಖ."

" ಉಭಯ ಕುಶಲೋಪರಿ.............. "

ಎನ್ನಲು ಇಬ್ಬರೂ ನಕ್ಕರು.

ಕಾರು ' ಬೃಂದಾವನ ' ಮುಟ್ಟಿತು.

ಮಹಾದ್ವಾರದಲ್ಲಿ ಶುಲ್ಕ ತೆತ್ತಮೇಲೆ ಕಾರು ಒಳಗೆ ಪ್ರವೇಶಿಸಿತು.

ಡ್ರೈವರ್ ಕಾರನ್ನು ' ರೆಸ್ಟುರಾ ' ಬಳಿ ನಿಲ್ಲಿಸಿದ.

ಇಬ್ಬರೂ ಕೆಳಗಿಳಿದು ಉದ್ಯಾನ ಪ್ರವೇಶಿಸಿದರು.

" ಶಾರದಾ, ನೀನಿಲ್ಲಿಗೆ ಬಹಳ ಸಲ ಬಂದಿರುವೆಯಾ ? "

" ನಾಲ್ಕೈದು ಸಲ ಬಂದಿದ್ದೇನೆ.— ನೀವು........"

“ನಾನೂ ಅಷ್ಟೇ. ಎಷ್ಟು ಬಾರಿ ಬಂದರೂ ಈ ವನ ಹೊಸದಾಗಿ ಕಾಣುತ್ತದೆ. ಹೂಗಳ ಮೇಲೆ ಚೆಲ್ಲಾಡುವ ವರ್ಣದೀಪಗಳು ಅವುಗಳಿಗೆ ನಿತ್ಯನೂತನತೆಯನ್ನು ತಂದುಕೊಡುತ್ತವೆ.”

“ನನಗೆ ಈ ಕೃತಕ ತಡಸಲನ್ನು ಕಂಡರೆ ಬಹಳ ಇಷ್ಟ. ಸ್ಫಟಿಕದ ಮಣಿಗಳಂತೆ ಕಾಣುವ ನೀರಿನ ಹನಿಗಳೊಂದಿಗೆ ನೀಲಿ ಬೆಳಕು ಹೇಗೆ ಹೊಂದಿಕೊಳ್ಳುತ್ತದೆ ನೋಡಿ. ಒಮ್ಮೆ ಇದನ್ನು ನೋಡಿದ ನಾನು ಇದೇ ವರ್ಣದ ಸೀರೆ ಕೊಳ್ಳಲು ನಿಶ್ಚಯಿಸಿ, ಮೈಸೂರಿನ ಜವಳಿ ಅಂಗಡಿಗಳನ್ನೆಲ್ಲಾ ಗೂರಾಡಿದೆ.”

“ಸೀರೆ ಸಿಕ್ಕಿತೇ ?”

“ಸಿಕ್ಕಿತು.”

ಇಬ್ಬರೂ ಮಾತನಾಡಿಕೊಂಡು ದೋಣಿಯಿದ್ದಲ್ಲಿಗೆ ಬಂದರು.

“ದೋಣಿಯಲ್ಲಿ ಹೋಗೋಣವೇ ?”

“ಆಗಬಹುದು.”

ಸುಬ್ಬುಕೃಷ್ಣ ‘ಸ್ಟೀಮ್ ಲಾಂಚ್’ ಡ್ರೈವರನ್ನು ಕರೆಯಲು ಶಾರದಾ,

“ಸ್ಟೀಮ್ ಲಾಂಚ್ (Steam Launch) ಬೇಡ— ಸಾಧಾರಣ ದೋಣಿಯಲ್ಲಿ ಹೋಗೋಣ” ಎಂದಳು.

ಕೃಷ್ಣರಾಜಸಾಗರ ಪ್ರಶಾಂತವಾಗಿತ್ತು.

ತಿಂಗಳ ಬೆಳಕು ವಾತಾವರಣವನ್ನು ಬೆಳಗಿಸಿತ್ತು.

ನೀರಿನಲ್ಲಿ ಚಂದ್ರನ ಪ್ರತಿಬಿಂಬ ಮೂಡಿತ್ತು.

ದೋಣಿ ಸಾಗರದ ಮಧ್ಯೆ ಬರಲು, ಸುಬ್ಬುಕೃಷ್ಣ,

“ಶಾರದಾ, ಯಾವದಾದರೂ ಶ್ಲೋಕ ಹಾಡು” ಎಂದ.

“ಅರ್ಧ ದಾರಿ ಈಗಾಗಲೇ ಬಂದಿದ್ದೇವೆ. ಹೊತ್ತಾಯಿತು ಎಂದು ಅಂಬಿಗ ಅವಸರಿಸುತ್ತಾನೋ ಏನೋ ?”

“ನಿನ್ನ ಹಾಡಿಕೆ ಮುಗಿಯುವವರೆಗೆ ಸಾಗರದ ಪ್ರದಕ್ಷಿಣೆ ಮಾಡುತ್ತಿರುವಂತೆ ಅಂಬಿಗನಿಗೆ ಹೇಳುತ್ತೇನೆ.”

ಶಾರದಾ ಧ್ವನಿ ಸರಿಮಾಡಿಕೊಂಡು ಹಾಡಲಾರಂಭಿಸಿದಳು :

“ ಸಾಯಂಕಾಲೇ ವನಾಂತೇ ಕುಸುಮಿತಸಮಯೇ
ಸೈಕತೇ ಚಂದ್ರಿಕಾಯಾಂ
ತ್ರೈಲೋಕ್ಯಾಕರ್ಷಣಾಂಗಂ ಸುರನರಗಣಿಕಾ—
ಮೋಹನಾಪಾಂಗಮೂರ್ತಿಮ್
ಸೇವ್ಯಂ ಶೃಂಗಾರಭಾವೈಃ ನವರಸಭರಿತೈಃ
ಗೋಪಕನ್ಯಾಸಹಸ್ರೈಃ
ವಂದೇಹಂ ರಾಸಕೇಳೀ ರತಮತಿಸುಭಗಂ
ವಶ್ಯಗೋಪಾಲಕೃಷ್ಣಮ್ ॥ ”

ಐದು ರಾಗಗಳನ್ನು ಉಪಯೋಗಿಸಿಕೊಂಡು ಅವಳು ರಾಗಮಾಲಿಕೆಯಲ್ಲಿ ಹಾಡಿದಳು.

ಅಂಬಿಗ ಮೆಲ್ಲನೆ ದೋಣಿಯನ್ನು ದಡದತ್ತ ತರುತ್ತಿದ್ದ.

ಸುಬ್ಬುಕೃಷ್ಣ ಮೌನಿಯಾಗಿ ಕುಳಿತುದನ್ನು ಕಂಡ ಶಾರದೆ,

“ ಸುಮ್ಮನಾದಿರಲ್ಲಾ—ಏಕೆ ? ” ಎಂದಳು.

“ ಪದ್ಮನಾಭರಾಯರು ಹೇಳಿದ ಮಾತು ಜ್ಞಾಪಕಕ್ಕೆ ಬಂತು...........”

ಶಾರದೆ ನಸುನಾಚಿದಳು.

ದೋಣಿಯಿಂದಿಳಿದು ಇಬ್ಬರೂ ‘ ರೆಸ್ಟುರಾ ’ಕ್ಕೆ ಬಂದರು.

ಸುಬ್ಬುಕೃಷ್ಣ ಎರಡು ಐಸ್‌ಕ್ರೀಮ್‌ಗೆ (Icecream) ಆರ್ಡರ್ ಮಾಡಿದ.

ಐಸ್‌ಕ್ರೀಮ್ ಬರಲು ಸುಬ್ಬುಕೃಷ್ಣ,

“ ಐಸ್‌ಕ್ರೀಮ್ ತಿಂದರೆ ಸಂಗೀತವಿದುಷಿಯರಿಗೆ ಗಂಟಲು ಕಟ್ಟುತ್ತದೆ.”

ತನ್ನ ಕಪ್ ಕೈಗೆತ್ತಿಕೊಂಡ ಶಾರದಾ,

“ ಏನಿಲ್ಲ. ನನಗೆ ಅಭ್ಯಾಸವಾಗಿದೆ ” ಎಂದಳು.

“ ನಿನಗೆ ಐಸ್‌ಕ್ರೀಮ್ ಕಂಡರೆ ಇಷ್ಟವೇ ? ”

“ ಹ್ಞೂ—ತುಂಬ ಇಷ್ಟ. ನಿಮಗೆ ? ”

“ ನನಗೂ ತುಂಬ ಇಷ್ಟ.”

" ನಿಮಗೆ ಡ್ರೈವಿಂಗ್ ಬರುತ್ತದೆಯೇ ? "

" ಇಲ್ಲ."

" ಸಿದ್ದಪ್ಪಾಜೀಗೆ ಹೇಳಿ—ಕಲಿಸಿಕೊಡುತ್ತಾನೆ."

" ನಿನಗೆ ಡ್ರೈವಿಂಗ್ ಬರುತ್ತದೆಯೇ ? "

" ಅಣ್ಣ ಕಲಿಸಿಕೊಟ್ಟಿದ್ದಾರೆ—ಆದರೆ ನಾನು ಡ್ರೈವ್ ಮಾಡುವುದಕ್ಕೆ ಅವರೊಪ್ಪುವುದಿಲ್ಲ."

" ನಿಜ—ಮುದ್ದಿನ ಮಗಳು—ನಿನಗೇನಾದರೂ ಘಾತವಾದೀತೆಂದು ಭಯ. ನನಗೆ ಸಿದ್ದಪ್ಪಾಜಿ ಏಕೆ ಡ್ರೈವಿಂಗ್ ಹೇಳಿಕೊಡಬೇಕು— ನೀನೇ ಹೇಳಿಕೊಡು."

ಶಾರದಾ ನಸುನಗುತ್ತಾ,

" ಆಗಬಹುದು " ಎಂದಳು.

ಐಸ್‌ಕ್ರೀಮ್ ಮುಗಿಸಿದ ಸುಬ್ಬುಕೃಷ್ಣ,

" ಇನ್ನು ನಾವು ಹೊರಡಬೇಕು. ನಿಮ್ಮ ತಂದೆಯವರನ್ನು ಆಫೀಸಿನಿಂದ ಕರೆತರಲು ಕಾರ್ ಕಳಿಸಬೇಕಲ್ಲವೇ ? "

" ಇಲ್ಲ. ಅವರು ಆಫೀಸಿನಿಂದ ದಿನವೂ ನಡೆದುಕೊಂಡು ಮನೆಗೆ ಬರುತ್ತಾರೆ."

ಇಬ್ಬರೂ ಬಂದು ಕಾರಿನಲ್ಲಿ ಕುಳಿತು ಗೃಹಾಭಿಮುಖರಾದರು.

ಮನೆ ಸಮೀಪಿಸಿದಂತೆ ಶಾರದಾ ನಿಟ್ಟುಸಿರುಬಿಟ್ಟು,

" ಈಗ ಹಾಸ್ಟಲ್ಲಿಗೆ ಹೋಗಿಬಿಡುತ್ತೀರಾ ? "

" ಹೋಗಬೇಕಲ್ಲ."

" ನೀವು ನಮ್ಮ ಮನೆಗೇ ಬಂದಿರಲಿ ಎಂದು ನಮ್ಮ ತಂದೆಯವರು ನಿಮ್ಮ ತಂದೆಯವರಿಗೆ ಹೇಳಿದರಂತೆ ! "

" ಹೌದು—ಅಣ್ಣ ಒಪ್ಪಲಿಲ್ಲ."

" ಪುನಃ ಯಾವಾಗ ನಿಮ್ಮನ್ನು ಕಾಣುವುದು ? "

" ನಾಳೆಯೋ ನಾಡಿದ್ದೋ ಬರುತ್ತೇನೆ."

" ನಾಳೆಯೇ ಬನ್ನಿ."

" ಆಗಲಿ, ನನ್ನ ಶಾರಿ "

ಎಂದವಳ ಕೈಹಿಡಿದ.

ಶಾರದಾ ಅವನ ಕೈ ಮೇಲೆ ತನ್ನ ಕೈ ಇಟ್ಟಳು.

ಮನೆ ಬರಲು, ಶಾರದಾ ಕೆಳಗಿಳಿದು,

" ಒಳಗೆ ಬಂದು ಹೋಗುವುದಿಲ್ಲವೇ ? "

" ಇಲ್ಲ—ನಾಳೆ ಬರುತ್ತೇನೆ."

" ಬೇಗ ಬನ್ನಿ."

" ಆಗಲಿ—ನನ್ನ ಹಾಸ್ಟೆಲ್ಲಿನಲ್ಲಿ ಬಿಟ್ಟುಬಿಡು ಸಿದ್ದಪ್ಪಾಜಿ" ಎಂದ.

ಕಾರು ಮುಂದೆ ಅಡಿಯಿಟ್ಟಿತು.

ಕಾರ್ ಕಣ್ಮರೆಯಾಗುವವರೆಗೂ ಶಾರದಾ ಗೇಟಿನ ಬಳಿಯೇ ನಿಂತಿದ್ದಳು.

೮

ಸುಬ್ಬುಕೃಷ್ಣ ಎಂ.ಸಿ.ಎಸ್. ಪರೀಕ್ಷೆಗೆ ಕೂಡಲು ನಿಶ್ಚಯಿಸಿ ಉಗ್ರ ಅಭ್ಯಾಸ ಆರಂಭಿಸಿದ. ಲಕ್ಷ್ಮೀಪುರಕ್ಕೆ ಹೋಗುವುದಕ್ಕೆ ಅವನಿಗೆ ದಿನಗಟ್ಟಳೆ ಪುರಸತ್ತು ಆಗುತ್ತಿರಲಿಲ್ಲ.

ಒಂದು ದಿನ ಶಾರದೆ ಸಿಟ್ಟಾಗಿ,

" ಹೋಗಿ—ನಿಮಗೆ ನಿಮ್ಮ ಓದೇ ಹೆಚ್ಚು " ಎಂದಳು.

" ಕೋಪ ಮಾಡಿಕೊಳ್ಳಬೇಡ ಶಾರಿ–ಇನ್ನು ಒಂದೇ ತಿಂಗಳು–ಪರೀಕ್ಷೆ ಮುಗಿದು ಹೋಗುತ್ತದೆ. ಮದುವೆಯ ಹೊತ್ತಿಗೆ ರಿಸಲ್ಟ್ಸ (Results) ಬಂದರೆ ಎಷ್ಟು ಚೆನ್ನಾಗಿರುತ್ತದೆ."

" ಈಗಲೇ ಹೀಗೆ ಮಾಡುವವರು ನಾಳೆ ಅಸಿಸ್ಟೆಂಟ್ ಕಮಿಷನರ್ ಆದ ಮೇಲೆ ನನ್ನ ಮಾತೇ ಆಡಿಸಲ್ಲ."

" ಹುಚ್ಚಿ—ನೀನೇ ನನ್ನ ಸರ್ವಸ್ವ. ನಿನ್ನ ಮಾತನಾಡಿಸದೆ ಇನ್ನು ಯಾರನ್ನು ಮಾತನಾಡಿಸಲಿ ? "

" ನೀವು ಪರೀಕ್ಷೆಗೆ ಕೂಡುವ ವಿಷಯ ನಿಮ್ಮ ತಾಯಿ, ತಂದೆಗಳಿಗೆ ತಿಳಿಸಿದ್ದೀರಾ ? "

" ತಿಳಿಸಿದ್ದೇನೆ. ಸರ್ಕಾರಿ ನೌಕರಿ ಮಾಡುವುದು ನಮ್ಮ ತಂದೆಯವರಿಗೆ ಇಷ್ಟವಿಲ್ಲ. ನಾನು ಎಲ್.ಎಲ್.ಬಿ ಮಾಡಿಕೊಂಡು ಲಾಯರಾಗಲಿ ಎಂದು ಅವರ ಅಪೇಕ್ಷೆ."

" ಹೌದ್ರಿ. ಅದು ಒಳ್ಳೆಯ ಐಡಿಯಾ (Idea) ನೀವು ಲಾಯರಾದರೆ ಅಣ್ಣನ ಜತೆಯಲ್ಲಿಯೇ ಪ್ರಾಕ್ಟೀಸ್ (Practice) ಮಾಡಬಹುದು–"

" ನನ್ನ ಸ್ವಭಾವಕ್ಕೆ ಲಾಯರ್‌ವೃತ್ತಿ ಒಗ್ಗುವುದಿಲ್ಲ ಶಾರೀ. ಅಭ್ಯಾಸ ವಿಲ್ಲದ ಹಾರವ ಹೋಮಮಾಡಿ ಗಡ್ಡಮೀಸೆ ಸುಟ್ಟುಕೊಂಡ ಎಂದ ಹಾಗೆ ಆಗಬಾರದು."

ಶಾರದಾ ನಗುತ್ತಾ,

" ಈ ಗಾದೆಗಳನ್ನೆಲ್ಲಾ ಎಲ್ಲಿ ಕಲಿತಿದ್ರೀ ? "

" ಅಮ್ಮನ ಸ್ಕೂಲಿನಲ್ಲಿ—ಶಾರಿ, ನಾನೂ ನೀನು ಇಷ್ಟು ಸಲಿಗೆಯಿಂದ ಇರುವುದನ್ನು ಕಂಡು ನಿಮ್ಮ ತಾಯಿಯವರು ಏನೂ ಅನ್ನಲಿಲ್ಲವೇ ? "

" ನಮ್ಮಮ್ಮ ಪರ್‌ಫೆಕ್ಟ್ ಜಂಟಲ್‌ಮನ್ (Perfect Gentlemen) ಕಣ್ರೀ—ನನ್ನ ವಿಷಯದಲ್ಲಿ ತುಂಬ ನಂಬಿಕೆ ಇಟ್ಟುಕೊಂಡಿದ್ದಾರೆ."

" ಆ ನಂಬಿಕೆಯನ್ನು ನಾವು ದುರುಪಯೋಗಪಡಿಸಿಲ್ಲ."

" ನಿಮ್ಮ ಪರೀಕ್ಷೆಯ ರಿಸಲ್ಟ್ ಬಂದಕೂಡಲೆ ಕೆಲಸ ಕೊಡುತ್ತಾರೆಯೋ ? "

" ಇಲ್ಲ. ಆರು ತಿಂಗಳು ಟ್ರೇನಿಂಗ್ (Training) ಆಗಬೇಕು."

" ಟ್ರೇನಿಂಗಿಗೆ ಎಲ್ಲಿ ಕಳಿಸುತ್ತಾರೆ ? "

" ಗೊತ್ತಿಲ್ಲ. ಯಾವದಾದರೂ ತಾಲ್ಲೂಕಿಗೋ ಡಿಸ್ಟ್ರಿಕ್ಟಿಗೋ ಕಳಿಸುತ್ತಾರೆ."

" ನನ್ನನ್ನು ಇಲ್ಲಿ ಬಿಟ್ಟು ಹೊರಟುಹೋಗುತ್ತೀರಾ ? "

" ನೀನು ಬೆಂಗಳೂರಿನಲ್ಲಿರು."

" ಉಹೂ—ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗಿ."

" ನನ್ನನ್ನು ಒಂದು ಕಡೆಗೆ ಪೋಸ್ಟ್ (Post) ಮಾಡಿದ ಮೇಲೆ ನೀನು ಬರುವುದು ಒಳ್ಳೆಯದು. ಸರಿಯಾದ ಮನೆ ಮಾಡಲು ಸಾಧ್ಯವಾಗುತ್ತದೆ."

" ಟ್ರೇನಿಂಗಿಗೆ ಮೈಸೂರಿಗೇ ಹಾಕಿಸಿಕೊಳ್ಳಿ."

" ಅದು ನನ್ನ ಕೈಯಲ್ಲಿದೆಯೇ ಶಾರಿ."

" ಅಣ್ಣನಿಗೆ ಒಂದು ಮಾತು ಹೇಳಿದರೆ, ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸಿ ನಿಮ್ಮನ್ನು ಇಲ್ಲಿಗೇ ಹಾಕಿಸುತ್ತಾರೆ."

" ಈಗಲೇ ಬೇಡ. ಸಮಯ ಬಂದಾಗ ತಿಳಿಸುತ್ತೇನೆ—ಆರು ತಿಂಗಳು ನಿನ್ನನ್ನು ಬಿಟ್ಟಿರುವುದು ನನಗೆ ಸುಲಭಸಾಧ್ಯವೇ ? "

"..................................................."

"ಆಶ್ವಯುಜ ಮಾಸ ಎದುರುನೋಡುತ್ತ ಈಗ ಕುಳಿತಿರುವುದೇ ಕಷ್ಟವಾಗಿದೆ."

ಶಾರದೆ ಅರ್ಥಗರ್ಭಿತವಾಗಿ ನಕ್ಕು,

"ಈಗ ನೀವು ಎಂ.ಸಿ.ಎಸ್. ಪರೀಕ್ಷೆ ಬಿಟ್ಟು ಮತ್ತೇನನ್ನೂ ಯೋಚಿಸ ತಕ್ಕದ್ದಲ್ಲ!"

"ರಾಣೀಸರ್ಕಾರ್ ಅವರ ಹುಕುಮ್ಮೇ ಇದು!"

"ಹೌದು"

"ಜಿಹಾ ಸರ್ಕಾರ್"

ಎಂದು ನೆಲಮುಟ್ಟಿ ಮೂರು ಬಾರಿ ಸಲಾಮು ಸಲ್ಲಿಸಿದ.

ಶಾರದಾ ಗಹಗಹಿಸಿ ನಗುತ್ತಾ,

"ಸಾಕು ಸುಮ್ಮನಿರ್ರೀ"

ಎಂದು ಅವನ ಕೈಹಿಡಿದಳು.

## ೬

ಸುಬ್ಬುಕೃಷ್ಣನ ಪ್ರಾರ್ಥನೆ ಮನ್ನಿಸಲೋಸುಗವೆಂಬಂತೆ ಆಶ್ವಯುಜ ಮಾಸ ಬಂದಿತು.

ಶಂಕರನಾರಾಯಣರಾಯರು ತಮ್ಮ ಎಲ್ಲ ಕೆಲಸಗಳನ್ನೂ ಬದಿಗಿಟ್ಟು, ಮದುವೆಯ ವ್ಯವಸ್ಥೆಗೆ ನಿಂತರು.

ರಾಯರ ಮನೆಯ ಸಮೀಪದಲ್ಲಿದ್ದ ಡಾ|| ಜನಾರ್ಧನನಾಯಿಡು ತಮ್ಮ ಮನೆ ಬಿಟ್ಟುಕೊಟ್ಟರು.

ಜನಾರ್ಧನನಾಯಿಡು ಅವರ ಮನೆಯಲ್ಲಿ ಬೀಗರನ್ನಿಳಿಸಲು ರಾಯರು ನಿಶ್ಚಯಿಸಿದರು.

ರಾಯರು ತಮ್ಮ ಮನೆ ಕಾಂಪೌಂಡಿನಲ್ಲಿ ವಿಶಾಲವಾದ ಚಪ್ಪರ ಹಾಕಿಸಿದರು. ಚಪ್ಪರ, ಮತ್ತು ಅವರ ಮನೆ ಸಹಸ್ರಾರು ವಿದ್ಯುದ್ದೀಪಗಳಿಂದ ವಿರಾಜಿಸಿತು.

ಯೋಗಾನರಸಿಂಹಯ್ಯನವರು, ಅವರ ಪರಿವಾರ 'ವರಪೂಜೆ'ಯ ದಿನ ಒಂದು ಗಂಟೆಯ ರೈಲು ಹತ್ತಿ, ಐದಕ್ಕೆ ಮೈಸೂರು ತಲುಪಿದರು. ಸುಬ್ಬುಕೃಷ್ಣ ಸ್ಟೇಷನ್ನಿನಲ್ಲಿ ತನ್ನ ಮನೆಯವರನ್ನು ಕೂಡಿಕೊಂಡ.

ರಾಯರು, ಪದ್ಮಾವತಮ್ಮನವರು ಸ್ಟೇಷನ್ನಿಗೆ ಹೋಗಿ ಬೀಗರನ್ನೂ ಅವರ ಪರಿವಾರವನ್ನೂ ಸ್ವಾಗತಿಸಿದರು.

ಎಲ್ಲರೂ ಗಂಡಿನವರ ಬಿಡದಿ ಸೇರಿದ ಮೇಲೆ ಕಾಫಿ, ಉಪಾಹಾರ ವಾಯಿತು.

ಎರಡು ಶ್ವೇತಾಶ್ವಗಳನ್ನು ಕಟ್ಟಿದ್ದ ಸಾರೋಟಿನಲ್ಲಿ ರಾಯರು, ಅಳಿಯನನ್ನು ಮೆರವಣಿಗೆ ಮಾಡಿ ಮನೆಗೆ ಕರೆತಂದರು.

ವರಪೂಜೆ ಶಾಸ್ತ್ರ ಮುಗಿದು, ಎಲ್ಲರಿಗೂ ‘ ಬಿಸಿಲಡಿಗೆ ’ ಊಟವಾಯಿತು.

ಮಾರನೆಯ ಬೆಳಿಗ್ಗೆ ಹತ್ತು ಗಂಟೆಗೇ ಲಗ್ನ.

ರಾಯರ ಮನೆಯಲ್ಲಿ ರಾತ್ರಿ ಯಾರೂ ಕಣ್ಣು ಮುಚ್ಚಲಿಲ್ಲ.

ಬೆಳಿಗ್ಗೆ ಅಳಿಯನಿಗೆ ‘ ಕಾಶೀಯಾತ್ರೆ ’ ಮಾಡಿಸಿ ಲಗ್ನಮಂಟಪಕ್ಕೆ ಕರೆತಂದರು.

ನಿಶ್ಚಿತಮುಹೂರ್ತಕ್ಕೆ ಸರಿಯಾಗಿ ಗೋವಿಂದಭಟ್ಟರು, ಶಾರದೆಯ ಕೈಯಲ್ಲಿ ಸುಬ್ಬುಕೃಷ್ಣನ ತಲೆಯ ಮೇಲೆ ಜೀರಿಗೆ ಬೆಲ್ಲ ಹಾಕಿಸಿದರು.

ಅದೇ ಸಂಜೆ ಆರತಿ ಅಕ್ಷತೆ.

ಚಪ್ಪರದಲ್ಲಿ ಎರಡು ವೇದಿಕೆಗಳು ಏರ್ಪಡಿಸಲ್ಪಟ್ಟಿದ್ದವು. ಒಂದು ವಧೂವರರನ್ನು ಕೂಡಿಸಲಿಕ್ಕೆ ; ಇನ್ನೊಂದು ಸಂಗೀತ ನೃತ್ಯಗಾರರಿಗೆ !

ಆರಕ್ಕೆ ಸರಿಯಾಗಿ ಬಂದ ಭರತನಾಟ್ಯ ವಿದುಷಿ ಸುಂದರಮ್ಮ ತನ್ನ ಶಿಷ್ಯ ಶಿಷ್ಯೆಯರು, ಮೇಳದವರ ನೆರವಿನಿಂದ ಪ್ರದರ್ಶನ ಆರಂಭಿಸಿದಳು.

ಊರಿನ ಸಮಸ್ತ ಗಣ್ಯರಿಗೂ, ಆಹ್ವಾನ ಪತ್ರಿಕೆಗಳು ಕಳಿಸಲ್ಪಟ್ಟಿದ್ದವು. ಜನ ತಂಡೋಪತಂಡವಾಗಿ ಆಗಮಿಸಿ ವಧೂವರರನ್ನು ಆಶೀರ್ವದಿಸಿದರು. ಇಷ್ಟಮಿತ್ರರು, ಬಂಧುಬಾಂಧವರು ವಧೂವರರಿಗೆ ಉಡುಗೆರೆಗಳನ್ನಿತ್ತರು.

ಎಂಟು ಗಂಟೆಗೆ ಸರಿಯಾಗಿ ಶ್ರೀಮನ್ಮಹಾರಾಜರವರ ಸ್ವಾರಿ ಚಿತ್ತೈಸಿತು.

ಶಂಕರನಾರಾಯಣರಾಯರು, ಯೋಗಾನರಸಿಂಹಯ್ಯನವರು ಮಹಾ ಸ್ವಾಮಿಯವರನ್ನು ಭಕ್ತಿ ಗೌರವ ಪುರಸ್ಸರವಾಗಿ ಸ್ವಾಗತಿಸಿದರು.

ಮಹಾಸ್ವಾಮಿಯವರ ಜತೆ ಬಂದಿದ್ದ ಅವರ ಎ.ಡಿ.ಸಿಗಳು (A.D.C) ವಧುವಿಗೊಂದು ಕಾಶೀ ಪೀತಾಂಬರ, ವರನಿಗೆ ಕಿನ್‌ಕಾಪಿನ ವಸ್ತ್ರಗಳನ್ನು ಓದಿಸಿದರು.

ಕಾಲುಗಂಟೆ ಕುಳಿತಿದ್ದ ಮಹಾಸ್ವಾಮಿಯವರೆದ್ದು ವಧೂವರರ ಬಳಿಗೆ ಬಂದು ಇಬ್ಬರನ್ನೂ ಆಶೀರ್ವದಿಸಿದರು.

ರಾಯರು ಮಹಾಸ್ವಾಮಿಯವರಿಗೆ ಹೂವಮಾಲೆ ಹಾಕಿ, ಫಲತಾಂಬೂಲ ಅರ್ಪಿಸಿದರು.

ಆರತಿ ಅಕ್ಷತೆ ಮುಗಿಯಲು ೯–೩೦ ಆಯಿತು.

ರಾತ್ರಿ ಮತ್ತೆ ದಿವ್ಯಾತನ.

ಎಲ್ಲರ ಊಟ ಮುಗಿದ ಮೇಲೆ ಶಂಕರನಾರಾಯಣರಾಯರು, ಯೋಗಾ ನರಸಿಂಹಯ್ಯನವರ ಬಳಿಗೆ ಬಂದು,

"ನ್ಯೂನಾತಿರೇಕಗಳು ಏನಾದರೂ ಆಗಿದ್ದರೆ ಕ್ಷಮಿಸಬೇಕು" ಎಂದರು.

ಯೋಗಾನರಸಿಂಹಯ್ಯನವರೆದ್ದು ರಾಯರ ಜೋಡಿಸಿದ ಕರಗಳನ್ನು ಹಿಡಿದು,

"ಚರಿತ್ರಾರ್ಹವಾದ ಮದುವೆ ಆಯಿತು ರಾಯರೇ. ಮಹಾಸ್ವಾಮಿಯವರು ದಯೆಮಾಡಿಸಿದ್ದು ನಮ್ಮ ಪುಣ್ಯ— ನಾಗೋಲಿ ಶಾಸ್ತ್ರ ನಾಳೆ ಮುಗಿಸಿಬಿಡಿ."

"ಉಂಟೇ ?—ನಾಳೆಯಿಂದ ಮೂರು ದಿನ ಆರತಿ ಅಕ್ಷತೆ—ಆ ಮೇಲೆ ನಾಗೋಲಿ."

"ಮೂರು ದಿನ ಏನು ಮಾಡುವುದು ?"

"ಬೆಳಿಗ್ಗೆ ಸಾಯಂಕಾಲ ಎರಡು ಹೊತ್ತೂ ಸಂಗೀತ ಕಛೇರಿಗಳನ್ನೇರ್ಪಡಿಸಿದ್ದೇನೆ."

"ಏಕೆ ಹೀಗೆ ಹಣವ್ಯಯಮಾಡುತ್ತಿರುವಿರಿ ?"

"ಸ್ವಾಮಿ, ನನಗಿರುವವಳು ಒಬ್ಬ ಮಗಳು. ಅವಳ ಮದುವೆಗೆ ನಾನು ಖರ್ಚುಮಾಡದೆ ಇನ್ನು ಯಾವಾಗ ಖರ್ಚುಮಾಡಬೇಕು. ಈ ಸಂದರ್ಭದಲ್ಲಿ ನಾವು ವಿದ್ವಾಂಸರನ್ನು ಬರಮಾಡಿಕೊಂಡು ಆದರಿಸದಿದ್ದರೆ ದೇಶದಲ್ಲಿ ಸಂಗೀತ, ಸಾಹಿತ್ಯ ಅಭಿವೃದ್ಧಿ ಹೊಂದುವುದು ಹೇಗೆ ?"

"ನಿಮ್ಮ ಸಂತೋಷವಿದ್ದಂತೆ ಮಾಡಿಯಪ್ಪ. ನಿಮಗೆ ಹೇಳಲು ನಾನು ಶಕ್ತನಲ್ಲ."

ಮೂರನೆಯ ದಿನ ಬೆಳಿಗ್ಗೆ ರಾಯರು ಒಂದು ವಿಶೇಷ ಕಾರ್ಯಕ್ರಮವನ್ನೇರ್ಪಡಿಸಿದರು. ಒಂಭತ್ತು ಗಂಟೆಗೇ ಮೈಸೂರಿನ ಎಲ್ಲ ಸಂಸ್ಕೃತ, ಕನ್ನಡ ಪಂಡಿತರನ್ನೂ ರಾಯರು ಬರಮಾಡಿಕೊಂಡರು.

ಎರಡು ಗಂಟೆಗಳ ಕಾಲ ವಿದ್ವಾಂಸರು ವೇದಘೋಷ ಮಾಡಿ, ವಧೂವರರನ್ನು ಆಶೀರ್ವದಿಸಿದರು. ರಾಯರು ಎಲ್ಲ ವಿದ್ವಾಂಸರಿಗೂ ಒಂದೊಂದು ಜತೆ ಜರೀಪಂಚೆ, ಒಂದೊಂದು ಜರೀ ಉತ್ತರೀಯವಿತ್ತರು.

ಐದನೆಯ ದಿನ ನಾಗೋಲಿ ಶಾಸ್ತ್ರವೂ ಯಾವ ತೊಡಕೂ ಇಲ್ಲದೆ ನೆರವೇರಿತು.

ಮಾರನೆಯ ದಿನ ರಾಯರು ಊರಿನ ಗಣ್ಯರನ್ನೆಲ್ಲಾ ಆಹ್ವಾನಿಸಿ ಸೊಗಸಾದ ಔತಣವಿತ್ತರು.

ವಿವಾಹವಿಧಿಗಳೆಲ್ಲಾ ಸಾಂಗವಾಗಿ ನೆರವೇರಿದ್ದುದಕ್ಕೆ ಪದ್ಮಾವತಮ್ಮ ನವರಿಗೆ ಪರಮಸಂತೋಷವಾಗಿತ್ತು. ಅವರು ಬೀಗಿತ್ತಿಯ ಸಹಕಾರ, ಸೌಜನ್ಯವನ್ನು ಹಾಡಿ ಹಾಡಿ ಹೊಗಳಿದರು. ಕಮಲಾಕ್ಷಮ್ಮನವರು ಪದ್ಮಾವ ತಮ್ಮನವರನ್ನು ಹೊಗಳುತ್ತಾ,

" ನಿಮ್ಮದು ದೊಡ್ಡ ಕೈ ಕಣ್ರೀ " ಎಂದರು.

ಅವರ ಪರಸ್ಪರ ಪ್ರಶಂಸೆಯನ್ನು ಕೇಳಿಸಿಕೊಂಡ ನಾಗೂಬಾಯಿ,

" ಚೆನ್ನಾಯಿತು ಬಿಡಿ. ಬೀಗಿತ್ತಿಯರು ಕುಳಿತುಕೊಂಡು ಒಬ್ಬರ ನ್ನೊಬ್ಬರು ಹೊಗಳಿಕೊಳ್ಳುವುದಕ್ಕೆ ಆರಂಭಿಸಿದ್ದೀರಿ " ಎಂದರು.

" ನಿಮ್ಮ ಸ್ನೇಹಿತರು ನನ್ನನ್ನು ಕೃತಾರ್ಥಳನ್ನಾಗಿ ಮಾಡಿದರು ನಾಗೂ ಬಾಯಿ. ಇನ್ನು ಮೇಲೆ ನೀವು, ಕಮಲಾಕ್ಷಮ್ಮನವರು ನಾನು ಒಂದು ಎಂದು ಭಾವಿಸಬೇಕು."

" ಆಗಲಮ್ಮಾ ಆಗಲಿ."

" ನಿಮ್ಮನ್ನು ಒಂದು ವಿಷಯ ಕೇಳಬೇಕಾಗಿದೆ."

ನಾಗೂಬಾಯಿ ಹೊರಗೆ ಹೋಗಲು ಮೇಲಕ್ಕೆ ಏಳಲು,

" ನೀವೂ ಇರಬೇಕ್ರೀ " ಎಂದರು.

ನಾಗೂಬಾಯಿ ಸ್ವಸ್ಥಾನದಲ್ಲಿ ಕುಳಿತರು.

" ನಾಳೆಯೋ ನಾಡಿದ್ದೋ ದಿನಶುದ್ಧಿ ನೋಡಿಕೊಂಡು ಇನ್ನೊಂದು 'ಶಾಸ್ತ್ರ'ವನ್ನೂ ಏಕೆ ಮುಗಿಸಿಬಿಡಬಾರದು ? "

" ಒಳ್ಳೆಯ ಯೋಚನೆ. ಆ ವಿಷಯ ನಾನೇ ನಿಮಗೆ ಹೇಳಬೇಕೆಂದಿದ್ದೆ."

" ಸುಬ್ಬೂ ಯಾವದೋ ಪರೀಕ್ಷೆಗೆ ಓದುತ್ತಾ ಇದ್ದಾನಲ್ಲಾ ನಾಗೂ ಬಾಯಿ."

" ಓದಿದರೆ ಓದಲಿ—ಇದಕ್ಕೂ ಅದಕ್ಕೂ ಏನು ಸಂಬಂಧ ಕಮಲಾಕ್ಷಮ್ಮ."

" ಅವನು ಒಪ್ಪುತ್ತಾನೋ ಇಲ್ಲವೋ ? "

"ನಾನು ಒಪ್ಪಿಸುತ್ತೇನೆ–ನೀವು ನಾಳೆಯೋ ನಾಡಿದ್ದೋ ಇನ್ನೊಂದು 'ಶಾಸ್ತ್ರ' ಇಟ್ಟುಕೊಳ್ಳಿ ಪದ್ಮಾವತಮ್ಮ."

ಕಮಲಾಕ್ಷಮ್ಮ ನಕ್ಕು,

"ಹಾಗೇ ಮಾಡಿಯಮ್ಮ" ಎಂದರು.

"ಇನ್ನೊಂದು ವಿಷಯ ನಿಮಗೆ ಹೇಳಬೇಕಾಗಿದೆ. ನೀವು ಅನ್ಯಥಾ ಭಾವಿಸಬಾರದು ಕಮಲಾಕ್ಷಮ್ಮ."

"ನಿಸ್ಸಂಕೋಚವಾಗಿ ಹೇಳ್ರೀ."

"ನಾಳೆಯಿಂದ ಅಳೀಮಯ್ಯಂದಿರು ಇಲ್ಲೇ ಬಂದು ಇರಲಿ. ಶಾರದಾ ಇಲ್ಲಿ—ಅವರು ಹಾಸ್ಟಲ್ಲಿನಲ್ಲಿ ಏಕಿರಬೇಕು."

"ನನ್ನದೇನೂ ಅಭ್ಯಂತರವಿಲ್ಲಮ್ಮ. ಅವರನ್ನು ಒಂದು ಮಾತು ಕೇಳಿ ಬಿಡುತ್ತೇನೆ."

ನಾಗೂಬಾಯಿ ಮಧ್ಯೆ ಬಾಯಿ ಹಾಕಿ,

"ನೀವು ಕೇಳಬೇಡಿ ಕಮಲಾಕ್ಷಮ್ಮ. ನಾವು ಲಗ್ನಪತ್ರಿಕೆಗೆ ಬಂದಿದ್ದಾಗ ಶಂಕರನಾರಾಯಣರಾಯರು, ನಿಮ್ಮ ಯಜಮಾನರಿಗೆ ಇದೇ ಮಾತು ಹೇಳಿದರಂತೆ—ನಿಮ್ಮ ಯಜಮಾನರು ಒಪ್ಪಲಿಲ್ಲ."

"ಹಾಗಾದರೆ ಏನು ಮಾಡುವುದು ನಾಗೂಬಾಯಿ."

"ಏನೂ ಇಲ್ಲ. ನಮ್ಮ ಯಜಮಾನರಿಗೆ ಈ ಕೆಲಸ ಒಪ್ಪಿಸಿದರಾಯಿತು."

"ನಿಜ ಕಣ್ರೀ—ಪದ್ಮನಾಭರಾಯರಿಗೇ ಹೇಳಿ" ಎಂದರು.

"ಸುಬ್ಬೂದು ಎಲ್ಲಾ ಅಚ್ಚುಕಟ್ಟಾಯಿತು. ಅವನ ವಿಷಯ ಇನ್ನು ನಾವು ಯೋಚನೆ ಮಾಡಬೇಕಾಗಿಲ್ಲ. ಹಾಗೇ ರಾಮು, ಸೀತನಿಗೂ ಒಂದು ದಾರಿಯಾದರೆ ಸಾಕು. ರಾಮು ಎಂಜನಿಯರಿಂಗ್ ಓದ್ತಾ ಇದ್ದಾನೆ. ಪ್ಯಾಸ್ ಆದಕೂಡಲೆ ಅವನಿಗೆಲ್ಲಾದರೂ ಒಂದು ನೌಕರಿ ಸಿಕ್ಕುತ್ತದೆ—ಸೀತನದೇ ನನಗೆ ಯೋಚನೆಯಾಗಿರುವುದು."

"ಸೀತನಿಗೆ ಈಗ ಎಷ್ಟು ವಯಸ್ಸಮ್ಮ?"

"ಹದಿನೆಂಟು ತುಂಬತ್ರೀ.

"ಇನ್ನೂ ವರ್ಷ, ಎರಡು ವರ್ಷ ತಡೆಯುತ್ತೆ."

"ನಮ್ಮ ಕೈಕಾಲು ಗಟ್ಟಿಯಾಗಿರುವಾಗಲೇ ಅವಳಿಗೆ ಮದುವೆಮಾಡಿ

ಜವಾಬ್ದಾರಿ ಕಳೆದುಕೊಳ್ಳುವುದು ಒಳ್ಳೆಯದಲ್ಲವೇ ? ಪದ್ಮಾವತಮ್ಮ, ನಿಮ್ಮ ಕಡೆ ಒಳ್ಳೆಯ ಗಂಡುಗಳಿದ್ದರೆ ತಿಳಿಸಿ. ಮುಂದಿನ ವೈಶಾಖಕ್ಕೆ ಅವಳ ಮದುವೆ ಮುಗಿಸೇಬಿಡುತ್ತೇನೆ."

"ನಮ್ಮ ಪೈಕಿಯದೇ ಒಂದು ಗಂಡಿದೆ. ಆದರೆ ಅವರು ಅಷ್ಟು ಅನುಕೂಲಸ್ಥರಲ್ಲ."

"ಅವರು ಯಾರು ?"

"ನಮ್ಮ ಯಜಮಾನರಿಗೆ ಒಬ್ಬ ತಂಗಿಯಿದ್ದಳು. ಅವಳ ಯಜಮಾನರ ತಮ್ಮನ ಮಗ. ಹುಡುಗ ಬಿ.ಎ. ಪಾಸು ಮಾಡಿದ್ದಾನೆ. ಚಾಮರಾಜ ನಗರದ ಹೈಸ್ಕೂಲಿನಲ್ಲಿ ಮೇಷ್ಟ್ರಾಗಿದ್ದಾನೆ."

"ಅವನಿಗೆ ತಂದೆ ತಾಯಿ ಇದ್ದಾರೆಯೋ ?"

"ತಂದೆ ಇಲ್ಲ—ತಾಯಿ ಇದ್ದಾರೆ."

"ಹುಡುಗನ ಹೆಸರು ?"

"ಶ್ರೀನಿವಾಸಮೂರ್ತಿ."

"ವಯಸ್ಸು ?"

"ಇಪ್ಪತ್ತನಾಲ್ಕು."

"ಹುಡುಗನಿಗೆ ಎಷ್ಟು ಸಂಬಳ ಬರತ್ತೆ ?"

"ನೂರು ಬರುತ್ತಿರಬಹುದು. ನಂಜನಗೂಡಿನಲ್ಲಿ ಸ್ವಲ್ಪ ಗದ್ದೆ, ಬಾಳೇತೋಟ ಇದೆ."

"ಹುಡುಗನನ್ನು ಕರೆಸಿದ್ದರಾಗಿತ್ತು."

"ನಮ್ಮ ಮನೆ ಮದುವೆಗೆ ಬಂದಿದ್ದನಲ್ಲ !—ಅವನದೇ ಓಡಾಟ."

"ನಿಮ್ಮ ಯಜಮಾನರು 'ಮೂರ್ತಿ—ಮೂರ್ತಿ' ಎಂದು ಕರೆಯುತ್ತಿದ್ದರಲ್ಲಾ—ಆ ಹುಡುಗನೇ ?"

"ಹೂ."

"ಲಕ್ಷಣವಾಗಿದ್ದಾನೆ."

"ನೀವು ಒಪ್ಪಿದರೆ, ಅವನ ತಾಯಿಗೆ ಕಾಗದ ಬರೆದು ಕೇಳುತ್ತೇನೆ."

"ಹಾಗೇ ಮಾಡಿ. ಸೀತನಿಗೆ ಗಂಡು ಗೊತ್ತುಮಾಡಿಕೊಟ್ಟು ಪುಣ್ಯ ಕಟ್ಟಿಕೊಳ್ಳಿ" ಎಂದರು.

# ೧೦

ಶನಿವಾರ 'ಗರ್ಭಾದಾನ ಮಹೋತ್ಸವ' ನೆರವೇರಿಸುವುದೆಂದು ನಿಶ್ಚಯಿಸಲಾಯಿತು.

ಶುಕ್ರವಾರ ರಾಯರಿಗೂ, ಪದ್ಮಾವತಮ್ಮನವರಿಗೂ ಸ್ವಲ್ಪವೂ ಬಿಡುವಿಲ್ಲ. ಪದ್ಮಾವತಮ್ಮ ಗೃಹಕೃತ್ಯದ ಸಾಮಾನುಗಳನ್ನು ಖರೀದಿಮಾಡಲು ಹೊರಟರು. ರಾಯರು ಟೆಕ್ನಿಕಲ್ ಇನ್‌ಸ್ಟಿಟ್ಯೂಟಿಗೆ ಹೋಗಿ ಎರಡು ಮಂಚಗಳು, ಸೋಫಾ ಸೆಟ್, ಡ್ರೆಸಿಂಗ್ ಟೇಬಲ್, ಚೆಸ್ಟ್ ಆಫ್ ಡ್ರಾಯರ್‌ಗಳನ್ನು ಖರೀದಿ ಮಾಡಿದರು.

ಶಾರದೆಯ ರೂಮನ್ನೇ ಸಜ್ಜುಗೊಳಿಸಲಾಯಿತು. ಮಂಚಗಳಿಗೆ ಮೈಸೂರು ಮಲ್ಲಿಗೆಯ ಎಳೆಗಳೇ ತೆರೆಗಳಾದವು.

ಬೆಳಿಗ್ಗೆ ವಧೂವರರಿಗೆ ತೈಲಭ್ಯಂಜನವಾದ ಮೇಲೆ, ಹವನ ಹೋಮಾದಿಗಳಾದವು. ಮಧ್ಯಾಹ್ನ ಎಲ್ಲರಿಗೂ ಔತಣದೂಟ.

ಎಲ್ಲರ ಊಟವಾದ ಮೇಲೆ ಪದ್ಮಾವತಮ್ಮ ಮಗಳನ್ನು ಕರೆದು,

" ನೀನು ಸ್ವಲ್ಪ ಹೊತ್ತು ಮಲಗಿಕೋ ಹೋಗು—ಶಾರದಾ " ಎಂದರು.

" ನನಗೆ ನಿದ್ರೆ ಬರುತ್ತಿಲ್ಲಮ್ಮ."

" ಚಿಂತೆಯಿಲ್ಲ. ಸ್ವಲ್ಪ ಹೊತ್ತು ವಿಶ್ರಮಿಸಿಕೋ " ಎಂದರು.

ಹಾರ್ಡಿಯ ಕಾದಂಬರಿಯೊಂದನ್ನು ಓದುತ್ತ ಮಲಗಿದ ಶಾರದನಿಗೆ ಚೆನ್ನಾಗಿ ನಿದ್ರೆ ಹತ್ತಿತು. ಪದ್ಮಾವತಮ್ಮನವರೆ ಅವಳನ್ನು ನಾಲ್ಕು ಗಂಟೆಗೆ ಎಬ್ಬಿಸಬೇಕಾಯಿತು.

ಸಂಜೆಯಿದ್ದುದು ಹೆಂಗಸರ ಕಲಾಪ.

ಶಂಕರನಾರಾಯಣರಾಯರು ಬೀಗರನ್ನೂ ಪದ್ಮನಾಭರಾಯರನ್ನೂ ಕರೆದುಕೊಂಡು ವಾಯುವಿಹಾರಕ್ಕೆ ಹೊರಟರು.

ಏಳು ಗಂಟೆಯ ವೇಳೆಗೆ ಪದ್ಮಾವತಮ್ಮನವರ ಮನೆಯು ಹಜಾರ ಹೆಂಗಸರಿಂದ ಕಿಕ್ಕಿರಿದು ತುಂಬಿತು.

ಹಾಡು ಹಸೆ ಪೈಪೋಟಿಯ ಮೇಲೆ ಜರುಗಿತು.

ಹೆಂಗಸರು ಶಾರದೆಗೆ ಗಂಟುಬಿದ್ದು ಅವಳೂ ಹಾಡುವಂತೆ ಮಾಡಿದರು.

ಸುಮಾರು ಒಂಭತ್ತು ಗಂಟೆಗೆ ಶಾರದನನ್ನು ಶಯ್ಯಾಗೃಹಕ್ಕೆ ಕರೆದೊಯ್ದು ಹಾಸಿಗೆಯ ಮೇಲೆ ಕುಳ್ಳಿರಿಸಿದರು.

ಕಮಲಾಕ್ಷಮ್ಮನವರು ಹೊರಗೆ ಹೋಗಿ ಮಗನನ್ನು ಕರೆತಂದು ಶಾರದೆಯ ಪಕ್ಕದಲ್ಲಿ ಕುಳ್ಳಿರಿಸಿದರು.

" ಬೇಗಬೇಗ ಆರತಿ ಎತ್ತಿ ಮುಗಿಸಿ "

ಎಂದು ಪದ್ಮಾವತಮ್ಮ ಅವಸರಿಸಿದರು.

ಹೆಂಗಸರು ಹಾಸ್ಯ, ಪರಿಹಾಸ್ಯಗಳಿಂದ ಕಾಲದೂಡುತ್ತ ಬಂದರು.

ಪದ್ಮಾವತಮ್ಮನವರು ರೇಗಿ,

" ನಾಗೂಬಾಯಿ, ಆರತಿ ಮಾಡಿಕೊಂಡು ಬನ್ರೀ—ನೀವೂ ನಾನು ಎತ್ತೋಣ " ಎಂದರು.

ನಾಗೂಬಾಯಿ ಆರತಿ ಮಾಡಿ ತರಲು, ಡಾ॥ ಜನಾರ್ಧನನಾಯಿಡು ಅವರ ಮಗಳು ಕನಕವಲ್ಲಿ ಜತೆಯಾದಳು.

ಆರತಿ ಎತ್ತಿದುದು ಮುಗಿದ ಮೇಲೆ ಪದ್ಮಾವತಮ್ಮ, ಕಮಲಾಕ್ಷಮ್ಮ ಒಬ್ಬೊಬ್ಬರನ್ನಾಗಿ ಎಲ್ಲರನ್ನೂ ಹೊರಗಟ್ಟಿ, ಬಾಗಿಲು ಹಾಕಿಕೊಂಡು ಹೋದರು.

ಶಾರದಾ ಹಾಸಿಗೆಯ ಮೇಲೆ ಮೌನವಾಗಿ ಕುಳಿತಿದ್ದಳು.

ಸುಬ್ಬುಕೃಷ್ಣ, ಕೋಟು ತೆಗೆದು ರ್‍ಯಾಕಿಗೆ (Rack) ಹಾಕಿ, ಅವಳ ಬಳಿ ಕುಳಿತು ಮೆಲ್ಲನೆ ಗಲ್ಲಹಿಡಿದೆತ್ತಿದ.

ಶಾರದೆಯ ಕಣ್ಣುಗಳು ಹನಿಗೂಡಿದ್ದವು.

ತನ್ನ ಬೆರಳಿನಿಂದ ಅವಳ ಕಂಬನಿ ಒರಸಿ,

" ಏಕೆ ರಾಣಿ—ಕಣ್ಣೀರು " ಎಂದ.

" ಇದೆಲ್ಲಾ ಏನು ಪ್ರದರ್ಶನ—ಅಸಹ್ಯ."

" ಹಳೆಯ ಕಾಲದ ಜನ. ಇಷ್ಟಕ್ಕೆ ನೀನು ಬೇಸರಪಟ್ಟುಕೊಳ್ಳುವುದೇ ? "

ಎಂದವಳನ್ನಪ್ಪಿ ಮುದ್ದಿಸಿದ.

ಶಾರದಾ ಮುಗುಳ್ನಗೆ ಬೀರಿ,

"ತಡೆಯಿರಿ–ಸ್ವಲ್ಪ ಹಾಲೂ ಹಣ್ಣು ಕೊಡುತ್ತೇನೆ. ನಿಮಗೂ ಊಟವಿಲ್ಲ."

" ಮೇಜಿನ ಮೇಲೆ ನಮ್ಮತ್ತೆ ತಿಂಡಿ ಪೇರಿಸಿಟ್ಟಿದ್ದಾರೆ."

ಇಬ್ಬರೂ ಅಲ್ಪೋಪಹಾರ ಮಾಡಿ, ಬಾದಾಮಿ ಹಾಲು ಸೇವಿಸಿದರು. ಸುಬ್ಬುಕೃಷ್ಣ ಉತ್ಕಂಠಿತನಾಗಿ ಪತ್ನಿಯನ್ನಪ್ಪಿ,

" ಶಾರಿ, ಇದು ನನ್ನ ಜೀವನದ ಮಹಾದಿನ."

" ನನಗೂ ಇದು ಮಹಾದಿನ."

" ಅಮ್ಮ, ನಾಳೆಯಿಂದಲೇ ಕುಲಾವಿ ಹೊಲೆಯಲಾರಂಭಿಸುತ್ತಾಳೆ."

" ಯಾರಿಗೆ ? "

" ಮೊಮ್ಮಗನಿಗೆ ! "

" ಅಯ್ಯೋ—ಈಗಲೇ ಮಕ್ಕಳು ಮರಿ ಬೇಡ್ರೀ ! "

" ಬೇಕು—ಬೇಡ ಎನ್ನುವುದಕ್ಕೆ ನಾವು ಯಾರು ? "

" ನಿಮಗೆ ಬೇಕಾದರೆ ಆಗಲಿ."

" ನಿನಗೊಂದು ಸಂತೋಷದ ಸುದ್ದಿ ತಿಳಿಸಬೇಕಾಗಿದೆ.

" ಏನದು ? "

" ಅಪ್ಪನ ಅಪ್ಪಣೆ ದೊರಕಿತು."

" ಯಾವದಕ್ಕೆ."

" ನಾನು ಹಾಸ್ಟಲ್ ಬಿಟ್ಟು ಇಲ್ಲಿ ಬಂದಿರುವುದಕ್ಕೆ.—ಪದ್ಮನಾಭ ರಾಯರ ಶಿಫಾರಸ್ ! "

" ಈಗ ನನ್ನ ಮನಸ್ಸಿಗೆ ನೆಮ್ಮದಿಯಾಯಿತು–ಇದರ ಪಕ್ಕದ ರೂಮನ್ನು ನೀವು 'ಸ್ಟಡಿ' (Study) ಮಾಡಿಕೊಳ್ಳಬಹುದು. ನಾನು ನಿಮ್ಮ ಓದಿಗೆ ವಿಘ್ನಬರುವುದಿಲ್ಲ."

" ನಾನು ಓದುತ್ತಾ ಕುಳಿತುಕೊಂಡರೆ ನೀನೇನು ಮಾಡುವೆ ? "

" ವೀಣೆ ನುಡಿಸಿಕೊಳ್ಳುತ್ತೇನೆ."

" ನಿನ್ನ ಇಂಚರ ನನ್ನ ಕಿವಿಯ ಮೇಲೆ ಬಿದ್ದರೆ ನನ್ನ ಓದು ಸಾಗುತ್ತದೆಯೇ ? "

" ನನ್ನ ವೀಣೆ ನಿಮಗಷ್ಟು ಮೆಚ್ಚೇ ? "

“ ನೀನು ವೀಣೆ ಹಿಡಿದು ಕುಳಿತರೆ, ಪದ್ಮನಾಭರಾಯರು ಹೇಳಿದ ಹಾಗೆ...........”

ಅವನ ಬಾಯಿಮುಚ್ಚಿ,

“ ಸಾಕು—ಸಾಕು—ಸುಮ್ಮನಿರಿ.”

“ ಕ್ರಿಸ್‌ಮಸ್ ರಜಕ್ಕೆ ಮುಂಚೆ ನಾವು ಬೆಂಗಳೂರಿಗೆ ಹೋಗುವುದಕ್ಕಾಗುವುದಿಲ್ಲ.”

“ ಆ ವೇಳೆಗೆ ನಿಮ್ಮ ಪರೀಕ್ಷೆ ಮುಗಿದಿರುತ್ತದೆಯೇ ? ”

“ ಮುಗಿದಿರುತ್ತದೆ. ಮಾರ್ಚ ವೇಳೆಗೆ ರಿಸಲ್ಟ್ ಹೊರಬಿದ್ದು ನನ್ನ ಹಣೆಯ ಬರಹ ಇತ್ಯರ್ಥವಾಗಿರುತ್ತದೆ.

“ ನೀವು ತೇರ್ಗಡೆ ಹೊಂದುತ್ತೀರೆಂದು ನನಗೆ ನಂಬಿಕೆ ಇದೆ.”

“ ಹೇಗೆ ? ”

“ ವುಮನ್ಸ್ ಇನ್‌ಸ್ಟಿನ್ಕ್ಟ (Woman's instinct) ”

“ ನಿನ್ನ ಇನ್‌ಸ್ಟಿನಕ್ಟೇ ನಿಜವಾಗಲಿ.”

“ ಒಮ್ಮೆ ನಿಜವಾಯಿತಲ್ಲಾ ! ”

“ ಯಾವಾಗ ? ”

“ ನೀವು ನನ್ನನ್ನು ನೋಡಲು ಬಂದಾಗ ! ”

“ ಹೇಗೆ ? ”

“ ನೀವು ನನ್ನವರು ಎಂದು ಭಾಸವಾಯಿತು.

“ ನನಗೂ ಹಾಗೇ ಆಯಿತು ಶಾರಿ—ಯಾವ ಕಾರಣಕ್ಕಾದರೂ ಈ ಸಂಬಂಧ ಕಡಿದುಹೋಗಿದ್ದರೆ, ನಾನು ಮದುವೆಯನ್ನೇ ಆಗುತ್ತಿರಲಿಲ್ಲ.”

ಶಾರದೆಯ ಮುಖ ಮಾರ್ದವಗೊಂಡಿತು.

ಮೆಲ್ಲನೆ ಗಂಡನ ಕೈಗಳನ್ನು ಹಿಡಿದು,

“ ಡಿಯರ್...........” ಎಂದಳು.

“ ಏನು ಶಾರಿ ? ”

“ ಯಾವಾಗಲೂ ನನ್ನನ್ನು ಹೀಗೆಯೇ ಪ್ರೀತಿಸಿ.”

“ ಆಲ್‌ವೇಸ್—ಆಲ್‌ವೇಸ್ ಮೈ ಡಿಯರ್ (Always - always - my dear) ” ಎಂದ.

# ೧೧

ಭಾನುವಾರ ಒಂದು ದಿನ ಮೈಸೂರಿನಲ್ಲಿದ್ದು ಸೋಮವಾರ, ಯೋಗಾ ನರಸಿಂಹಯ್ಯನವರೂ, ಅವರ ಪರಿವಾರ ಬೆಂಗಳೂರಿಗೆ ಪ್ರಯಾಣ ಬೆಳಸಿದರು.

ಸುಬ್ಬುಕೃಷ್ಣ ಹಾಸ್ಟಲ್ಲಿಗೆ ಹೋಗಿ ತನ್ನ ಬಟ್ಟೆಬರೆ, ಪುಸ್ತಕಗಳನ್ನು ತೆಗೆದುಕೊಂಡು, ಕಾಲೇಜಿಗೆ ರಜಾ ಬರೆದುಹಾಕಿ, ಮಾವನ ಮನೆಗೆ ಬಂದ.

ಪರೀಕ್ಷೆಗೆ ಇಪ್ಪತ್ತೇ ದಿನಗಳು ಉಳಿದವು.

ಮದುವೆಯ ಸಂಭ್ರಮದಲ್ಲಿ ಒಂದು ವಾರ ಕಳೆದುಹೋಗಿತ್ತು.

ಸುಬ್ಬುಕೃಷ್ಣ ಪುಸ್ತಕ ಪಿಶಾಚಿಯಾದ.

ರಾತ್ರಿ ಎಂಟು ಗಂಟೆಗೆ ಪದ್ಮಾವತಮ್ಮನವರು ಅಳಿಯ ಮಗಳನ್ನು ಕೂಡಿಸಿ ತಾವೇ ಬಡಿಸಿದರು.

ಸುಬ್ಬುಕೃಷ್ಣ ಊಟ ಮುಗಿಸಿದವನೇ ತನ್ನ 'ಸ್ಟಡಿ' ರೂಮ್ ಸೇರಿಬಿಟ್ಟ.

ಶಾರದಾ ತನ್ನ ಹಾರ್ಡಿ ಕಾದಂಬರಿ ಹಿಡಿದು ಕುಳಿತಳು.

ಒಂಭತ್ತುವರೆಯಾಯಿತು !

ರೂಮಿನ ದೊಡ್ಡ ದೀಪ ಆರಿಸಿ, ಬೆಡ್‌ಲ್ಯಾಂಪ್ (Bed Lamp) ಹಚ್ಚಿ ಮಲಗಿದಳು.

ಎಷ್ಟು ಪ್ರಯತ್ನಿಸಿದರೂ ನಿದ್ರೆ ಬಾರದು.

ಹಜಾರದ ಗಡಿಯಾರದಲ್ಲಿ ಹತ್ತು ಹೊಡೆಯಿತು.

ಬಲವಂತದಿಂದ ಕಣ್ಣುಮುಚ್ಚಿ ನಿದ್ರೆ ಮಾಡಲೆತ್ನಿಸಿದಳು.

ನಿದ್ರಾದೇವಿಗೆ ಕರುಣೆ ಬರಲಿಲ್ಲ.

ಹಜಾರದ ಗಡಿಯಾರ ಅರ್ಧಗಂಟೆ ಹೊಡೆಯಿತು—ಹತ್ತೂವರೆ ಗಂಟೆ !

ಮೇಲಕ್ಕೆದ್ದು ಸುಬ್ಬುಕೃಷ್ಣನ 'ಸ್ಟಡಿ' ರೂಮಿಗೆ ಬಂದು, ನೋಡಿದಳು.

ಟೇಬಲ್ ಲ್ಯಾಂಪಿನ ಬೆಳಕಿನಲ್ಲಿ ಸುಬ್ಬುಕೃಷ್ಣ ತದೇಕಚಿತ್ತನಾಗಿ ಓದುತ್ತ ಕುಳಿತಿದ್ದ.

ಅವಳು ಬಂದು ನಿಂತಿದ್ದರೂ ಅವನಿಗೆ ಅರಿವಿಲ್ಲ.

ಮೆಲ್ಲನೆ ಅವನ ಬಳಿಸಾರಿ, ಎರಡು ಕೈಗಳಿಂದ ಅವನ ಕಣ್ಣುಗಳನ್ನು ಮುಚ್ಚಿದಳು.

ಬೆಚ್ಚಿದ ಸುಬ್ಬುಕೃಷ್ಣ,

" ಯಾರು " ಎಂದ.

ಶಾರದೆ ಕೈಗಳನ್ನು ತೆಗೆದು,

" ಯಾರು—ನೋಡಿ ' ಎಂದಳು.

" ನಿದ್ರೆ ಬರಲಿಲ್ಲವೇ ಶಾರಿ ? "

" ಹೇಗೆ ಬರುತ್ತದೆ."

" ಈಗ ಗಂಟೆಯೆಷ್ಟು ? "

" ಹತ್ತೂವರೆ ? "

" ಇನ್ನು ಇಪ್ಪತ್ತು ದಿನಗಳಲ್ಲಿ ನಾನು ಪರೀಕ್ಷೆಗೆ ಕೂಡಬೇಕಾಗಿದೆ."

" ಇಪ್ಪತ್ತು ದಿನಗಳಲ್ಲಿ ಲೋಕವನ್ನೇ ಜಯಿಸಬಹುದು.

" ಈ ಪರೀಕ್ಷೆಯ ಮೇಲೆ ನನ್ನ ಭವಿಷ್ಯ ನಿಂತಿದೆ."

" ನಿಮ್ಮ ಮೇಲೆ ನನ್ನ ಭವಿಷ್ಯ ನಿಂತಿದೆ–ನಾಳೆ ಓದಿದರಾಯಿತು–ಏಳಿ ! "

" ನೀನು ಮಲಗಿಕೋ ಹೋಗು — ನಾನು ಹನ್ನೆರಡಕ್ಕೆ ಸರಿಯಾಗಿ ಬರುತ್ತೇನೆ."

" ಬೆಳಿಗ್ಗೆಯವರೆಗೂ ಓದಿ—ಬೇಡವೆಂದವರು ಯಾರು ? "

ಎಂದೆದ್ದು ಹೊರಟೇ ಹೋದಳು.

ಸುಬ್ಬುಕೃಷ್ಣ ಓದು ಮುಂದುವರಿಸಲೆತ್ನಿಸಿದ.

ಅವನ ಚಿತ್ತೈಕಾಗ್ರತೆಗೆ ಭಂಗಬಂದಿತ್ತು.

ಪುಸ್ತಕದ ಮೇಲೆ ಮನಸ್ಸನ್ನಿಡಲು ಸುಬ್ಬುಕೃಷ್ಣನಿಗೆ ದುಸ್ಸಾಧ್ಯ ವಾಯಿತು.

ಟೇಬಲ್ ಲ್ಯಾಂಪ್ ಆರಿಸಿ, ಶಯ್ಯಾಗೃಹಕ್ಕೆ ಬಂದ,

ಶಾರದಾ ಅಳುತ್ತ ಮಲಗಿದ್ದಳು.

ಅವಳ ಬಳಿ ಕುಳಿತ ಸುಬ್ಬುಕೃಷ್ಣ,

" ಶಾರಿ—ಶಾರೀ............ " ಎಂದ.

" ಹೋಗಿ–ಓದಿಕೋ ಹೋಗಿ—ನಿಮಗೆ ನಿಮ್ಮ ಪರೀಕ್ಷೆಯೇ ಹೆಚ್ಚು ! "

" ನನ್ನ ಪರೀಕ್ಷೆ ನಿನ್ನ ಪರೀಕ್ಷೆಯಲ್ಲವೇ ? "

" ಹೌದು—ಆದರೆ ಒಂದು ದಿನದಲ್ಲಿ ಪ್ರಪಂಚ ಮುಳುಗಿ ಹೋಗುತ್ತಿತ್ತೇ ? "

" ಪುಸ್ತಕ ಮುಚ್ಚಿಟ್ಟು ಬಂದಿದ್ದೇನೆ."

ಶಾರದಾ ಎದ್ದು ಕುಳಿತು,

" ನಿಜವಾಗಿ ? " ಎಂದಳು.

" ನೋಡು—ಟೇಬಲ್ ಲ್ಯಾಂಪ್ ಆರಿಸಿದ್ದೇನೆ."

ಶಾರದಾ ಉತ್ತರಿಸಲಿಲ್ಲ.

ಅವಳ ಎರಡು ಬಾಹುಗಳೂ ಸುಬ್ಬುಕೃಷ್ಣನ ಕುತ್ತಿಗೆಯನ್ನು ಬಳಸಿದವು.

## ೧೨

ಯೋಗನರಸಿಂಹಯ್ಯನವರು ಅವರ ಪರಿವಾರ ಬೆಂಗಳೂರು ತಲುಪಿದ ಒಂದು ವಾರ ಕಳೆದ ಮೇಲೆ ಪದ್ಮಾವತಮ್ಮನವರಿಂದ ಕಾಗದ ಬಂದಿತು.

'ಶ್ರೀನಿವಾಸಮೂರ್ತಿಯ ತಾಯಿ ಅಚ್ಚಮ್ಮನವರು ಇಲ್ಲಿಗೆ ಬಂದಿದ್ದರು. ಅವರೂ ಈ ವರ್ಷ ಮಗನ ಮದುವೆ ಮಾಡಲು ನಿಶ್ಚಯಿಸಿದ್ದಾರೆ. ನೀವು ಕೂಡಲೆ ಚಿ|| ಸೌ|| ಸೀತಮ್ಮನ ಜಾತಕ ಕಳಿಸಿಕೊಡಿ. ಸ್ವಲ್ಪ ಪ್ರಯತ್ನ ಮಾಡಿದರೆ ಈ ಸಂಬಂಧ ಕುದುರಿಸಬಹುದು.

ಅಳೀಮಯ್ಯಂದಿರು, ಚಿ|| ಸೌ|| ಶಾರದಾ ಆರೋಗ್ಯ ವಾಗಿದ್ದಾರೆ.'

ಯೋಗಾನರಸಿಂಹಯ್ಯನವರು ಸೀತಮ್ಮನ ಜಾತಕ ನಕಲು ಮಾಡಿಟ್ಟು ಕೊಂಡು,

"ಕಮಲೂ" ಎಂದು ಕರೆದರು.

"ಏನು?"

"ಸೀತೂ ಜಾತಕ ನಕಲು ಮಾಡಿಟ್ಟದ್ದೇನೆ—ಕಳಿಸು."

ಕಮಲಾಕ್ಷಮ್ಮ ಜಾತಕದ ಪ್ರತಿಯನ್ನು ಕೈಗೆ ತೆಗೆದುಕೊಂಡರು.

"ಗಂಡಿನವರು ಈ ವರ್ಷವೇ ಮದುವೆಯಾಗಬೇಕೆಂದರೆ ಏನು ಮಾಡುವುದು?"

"ಮಾಡಬೇಕು."

"ಮಾಡಬೇಕು ಸರಿ–ಹೇಗೆ–ಹಣಕ್ಕೇನು ಮಾಡುವುದು. ದೊಡ್ಡವರ ಸಂಬಂಧ ಮಾಡಿದೆವು ಎಂದು ಸುಬ್ಬು ಮದುವೇಗೆ ಕೈಯಲ್ಲಿದ್ದುದನ್ನೆಲ್ಲಾ

ಖರ್ಚು ಮಾಡಿಯಾಯಿತು. ಇದು ಅಕ್ಟೋಬರ್ ತಿಂಗಳು–ಮಾರ್ಚ್‌ವರೆಗೆ ಇನ್ನು ಐದು ತಿಂಗಳು ರಾಮೂಗೆ ಫೀಸು ಕೊಡಬೇಕು."

" ಸುಬ್ಬುಗೆ ಒಂದು ಕಾಗದ ಬರೆಯಿರಿ. ಈ ಐದು ತಿಂಗಳು ಅವನಿಗೆ ಬರುವ ಸಂಬಳ ಕಳಿಸಿಕೊಡಲಿ. ಹೇಗೂ ಮಾವನ ಮನೆಯಲ್ಲಿದ್ದಾನೆ–ಅವನಿಗೆ ಖರ್ಚು ಏನಿದೆ ? "

" ಸುಬ್ಬೂ ಹಣ ತೆಗೆದುಕೊಂಡು ನಾನು ಸೀತೂ ಮದುವೆ ಮಾಡಲೇ ? "

" ಶ್ರೀಮದ್ಗಾಂಭೀರ್ಯ ಮಾಡುತ್ತ ಕುಳಿತರಾಗುವುದಿಲ್ಲ. ಹೇಗಾದರೂ ಹಣ ಹೊಂದಿಸಬೇಕು. ಪದ್ಮನಾಭರಾಯರನ್ನು ಒಂದು ಮಾತು ಕೇಳಿ ನೋಡಿ."

" ಸ್ನೇಹ ಇರುವ ಕಡೆ ಹಣಕಾಸಿನ ವ್ಯವಹಾರ ಮಾಡಬಾರದು ? "

" ನೀವು ಕೇಳಬೇಡಿ—ನಾನು ಕೇಳುತ್ತೇನೆ."

" ಇವತ್ತು ಜಾತಕ ಕಳಿಸು—ಅವರಿಂದ ಉತ್ತರ ಬಂದ ಮೇಲೆ ವಿಚಾರ ಮಾಡೋಣ "

ಎಂದು ಹೇಳಿದರು.

ಹತ್ತು ದಿನಗಳು ಕಳೆದವು.

ಕಮಲಾಕ್ಷಮ್ಮ ಪ್ರತಿನಿತ್ಯ ತಮ್ಮ ಕಾಗದಕ್ಕೆ ಉತ್ತರ ನಿರೀಕ್ಷಿಸುತ್ತಿದ್ದರು. ಹನ್ನೆರಡನೆಯ ದಿನ ಪದ್ಮಾವತಮ್ಮ ಕಾಗದ ಬರೆದು

> ' ಜಾತಕಾನುಕೂಲವಾಗಿದೆ. ನೀವು ಒಂದು ದಿನ ಗೊತ್ತುಮಾಡಿ ಅಚ್ಚಮ್ಮನವರಿಗೆ ತಿಳಿಸಿದರೆ, ಮಗನನ್ನು ಕರೆದು ಕೊಂಡು ಬರುತ್ತಾರೆ '

ಎಂದು ತಿಳಿಸಿದರು.

ಕಮಲಾಕ್ಷಮ್ಮ ಗಂಡನ ಕೈಗೆ ಕಾಗದವಿತ್ತರು.

ಅದೇ ಸಂಜೆ ವಾಯುವಿಹಾರಕ್ಕೆ ಪದ್ಮನಾಭರಾಯರ ಜೊತೆ ಹೊರಟ ಯೋಗಾನರಸಿಂಹಯ್ಯ, ಲೋಕಾಭಿರಾಮವಾಗಿ ಮಾತನಾಡುತ್ತಾ,

" ಬೀಗಿತ್ತಿಯವರಿಂದ ಕಾಗದ ಬಂದಿದೆ ನಾಭಾ— ಜಾತಕಾನುಕೂಲ ವಾಗಿದೆಯಂತೆ ! ನಾವು ಸ್ವಲ್ಪ ಪ್ರಯತ್ನಿಸಿದರೆ ಈ ಗಂಡು ಗೊತ್ತಾಗುತ್ತದೆ."

" ಪ್ರಯತ್ನಿಸಿದರೆ ಎಂದು ರಾಗ ಎಳೆಯುತ್ತೀಯಲ್ಲಯ್ಯ. ಎಣ್ಣೆ ಬರುವಾಗ ಕಣ್ಣುಮುಚ್ಚಿಕೊಳ್ಳುವುದೇ ? ಅವರೇ ಇಲ್ಲಿಗೆ ಬರುತ್ತಾರಂತೋ— ನೀವು ಸೀತಮ್ಮನನ್ನೂ ಕರೆದುಕೊಂಡು ಚಾಮರಾಜನಗರಕ್ಕೆ ಹೋಗ ಬೇಕೋ ? "

" ಅವರೆ ಬರುತ್ತಾರಂತೆ ? "

" ಒಂದು ತಾರೀಖು ನಿಶ್ಚಯಿಸಿ ಕಾಗದ ಬರೆದುಬಿಡು."

" ಅದೆಲ್ಲಾ ಆಗುತ್ತದೆ ನಾಥಾ........ಆದರೆ..............."

" ಹಣದ ಯೋಚನೆ."

" ಹೂ—ಬರೀಕೈಯಲ್ಲಿ ಮೊಳ ಹಾಕುವುದು ಹೇಗೆ ? "

" ಎಷ್ಟು ಬೇಕಾಗತ್ತೆ ? "

" ಬಡತನದಲ್ಲಿ ಮದುವೆಮಾಡಿದರೂ ಐದು ಸಾವಿರ ಬೇಡವೇ ? "

" ಹಣದ ವಿಷಯ ನನಗಿರಲಿ—ಪ್ರಯತ್ನ ಮುಂದುವರಿಸು."

" ಹಣ ನೀನು ಎಲ್ಲಿಂದ ತರುತ್ತೀ ? "

" ಅದು ನನ್ನ ಹಣೆಯಬರಹ–ನಿನಗೇಕೆ–ಕದ್ದುಕೊಂಡು ಬರುತ್ತೇನೆ."

" ನಾಗೂ ಬಾಯಿಯ ಕೈಗೆ ಚಿಪ್ಪು ಕೊಡುತ್ತೀಯಾ ? "

" ನಿನಗೆ ಹಣಕೊಟ್ಟರೆ ಎಲ್ಲಿ ಹೋಗತ್ತೇ ಯೋಗ. ನೀನೇಕೆ ಹೀಗೆ ಮಾತನಾಡುತ್ತಿರುವೆ ? ಒಬ್ಬ ಮಗ ಈಗಾಗಲೇ ಸಂಪಾದಿಸುತ್ತಿದ್ದಾನೆ— ಇನ್ನೊಬ್ಬ ಮುಂದಿನ ವರ್ಷ ಕೈಗೆ ಬರುತ್ತಾನೆ."

" ಮಕ್ಕಳ ಸಂಪಾದನೆಗೆ ನಾನು ಕೈಯೊಡ್ಡಬೇಕೇ ? "

" ಸೀತಮ್ಮ ಅವರಿಗೆ ದೂರದವಳೇ—ಸ್ವಂತ ತಂಗಿ ಅಲ್ಲವೇ ? "

" ಎಲ್ಲಾ ಸರಿ ಕಣಯ್ಯಾ....ಆದರೆ...."

" ಆದರೆ ಗೀದರೆ ಬೇಡ. ಕೈಯಲ್ಲಿರುವ ಕೆಲಸ ಮೊದಲು ಮುಗಿಸು— ಉಳಿದ ಮಾತು ಆಮೇಲೆ ಆಡೋಣ."

ಎಂದು ಯೋಗಾನರಸಿಂಹಯ್ಯನವರ ಬಾಯಿ ಮುಚ್ಚಿಸಿದರು.

# ೧೩

ಯೋಗಾನರಸಿಂಹಯ್ಯನವರು ಜೋಯಿಸರನ್ನು ವಿಚಾರಿಸಲು, ಅವರು, " ಮುಂದಿನ ಗುರುವಾರ ಪ್ರಶಸ್ತವಾಗಿದೆ " ಎಂದರು.

ಯೋಗಾನರಸಿಂಹಯ್ಯನವರು ಮಗನಿಗೆ ಕಾಗದ ಬರೆದು,

> ' ಗುರುವಾರ ದಿನ ಚೆನ್ನಾಗಿದೆಯಂತೆ. ನೀನೇ ಚಾಮರಾಜನಗರಕ್ಕೆ ಹೋಗಿ ಅಚ್ಚಮ್ಮನವರನ್ನೂ ಶ್ರೀನಿವಾಸಮೂರ್ತಿಯನ್ನೂ ಕರೆದುಕೊಂಡು ಬಾ '

ಎಂದು ತಿಳಿಸಿದರು.

ಸುಬ್ಬುಕೃಷ್ಣ ಕೂಡಲೆ ಮಾರುತ್ತರ ಬರೆದು,

> ' ಸೋಮವಾರದಿಂದ ನನ್ನ ಪರೀಕ್ಷೆ ಆರಂಭವಾಗುತ್ತದೆ. ಹೇಗೆ ಬರಲಿ. ಚಾಮರಾಜನಗರಕ್ಕೆ ರಾಮಸ್ವಾಮಿಯನ್ನು ಕಳಿಸುವುದು ಒಳ್ಳೆಯದು '

ಎಂದು ತಿಳಿಸಿದ.

ರಾಮಸ್ವಾಮಿಗೂ ಪರೀಕ್ಷೆ ಸಮೀಪಿಸುತ್ತಿತ್ತು.

ಆದರೆ ಅವನು ಚಾಮರಾಜನಗರಕ್ಕೆ ಹೋಗುವುದು ಅನಿವಾರ್ಯವಾಯಿತು.

ಬುಧವಾರವೇ ರಾಮಸ್ವಾಮಿ ಪ್ರಯಾಣ ಬೆಳಸುವುದೆಂದು ನಿಶ್ಚಯವಾಯಿತು.

ಅದೇ ಸಂಜೆ ಸೀತನಿಗೆ, ಕಮಲಾಕ್ಷಮ್ಮ ಜಡೆ ಹೆಣೆಯುತ್ತ ಕುಳಿತಿದ್ದರು.

ನಾಗೂಬಾಯಿ ಬಂದರು.

ಕಮಲಾಕ್ಷಮ್ಮ ಜಡೆ ಮುಗಿಸಿ,

“ ಮುಖ ತೊಳೆದುಕೊಂಡು ಹಣೆಗಿಟ್ಟುಕೊಳ್ಳಮ್ಮ” ಎಂದರು.

ಸೀತಾ ಎದ್ದು ಹೋಗಲು, ಕಮಲಾಕ್ಷಮ್ಮ ನಿಟ್ಟುಸಿರುಬಿಟ್ಟರು.

“ ಯಾಕ್ರೀ—ನಿಟ್ಟುಸಿರು ? ”

“ ನೀವು ಏನೇ ಹೇಳಿ—ಹೆಣ್ಣಾಗಿ ಹುಟ್ಟಬಾರದು ನಾಗೂಬಾಯಿ.”

“ ಗಂಡಿಗೇನು ಕಷ್ಟ, ವ್ಯಸನ ಇಲ್ಲವೇ ? ”

“ ಇಲ್ಲವೆಂದಲ್ಲ—ಆದರೆ ನಮ್ಮದು ಒಳಸಂಕಟ ! ”

“ ಸೀತೂ ಮದುವೆಯಾಗಿಬಿಟ್ಟರೆ, ನಿಮ್ಮನ್ನು ಹಿಡಿಯುವವರು ಯಾರ್‍ರೀ—? ”

“ ಹೌದು—ಆಗಬೇಕಲ್ಲ ! ”

“ ಆಗದೆ ಏನು ? ರಾಮು ಹೋಗಿದ್ದಾನಲ್ಲಾ ? ”

“ ನಾಗೂಬಾಯಿ, ಅಭಿಮಾನ ಬಿಟ್ಟು ಹೇಳಿ—ಸೀತೂ ಈಗ ಹೇಗಿದ್ದಾಳೆ ? ಚಾಮರಾಜನಗರದವರು ಅವಳನ್ನು ಒಪ್ಪುತ್ತಾರೆಯೇ ? ”

“ ನಿಮ್ಮ ಮಾತೇ ನನಗರ್ಥವಾಗುವುದಿಲ್ಲ. ಸೀತೂ ಏನಾಗಿದ್ದಾಳೆಂದು ಇಷ್ಟು ಯೋಚಿಸುತ್ತಿರುವಿರಿ ? ”

“ ನನ್ನ ಮಗು ಕಪ್ಪು.”

“ ಕಪ್ಪು ಕಸ್ತೂರಿ—ಕೃಷ್ಣದೇವರ ವರ್ಣ ಕೆಂಪೇ ? ”

“ ನಮ್ಮ ಮಗು ನಮ್ಮ ಕಣ್ಣಿಗೆ ಚಲುವೆ.”

“ ಕಣ್ಣಿದ್ದವರು ಎಲ್ಲರಿಗೂ ಸೀತೂ ಚಲುವೆ—ಬಿಳೀ ತೊಗಲು ಇದ್ದರೆ ಬಂತೆ ಭಾಗ್ಯ. ಸೀತೂ ಕಳೆಕಳೆಯಾಗಿ ಲಕ್ಷ್ಮೀ ಇದ್ದ ಹಾಗಿದ್ದಾಳೆ.”

“ ಬಾಯಿತುಂಬ ಹರಸಿ ನಾಗೂಬಾಯಿ. ನೀವು ಮಹಾ ಪತಿವ್ರತೆ. ನಿಮ್ಮ ಬಾಯಲ್ಲಿ ಬಂದದ್ದು ಕುರ್ತೇಟು.”

ನಾಗೂಬಾಯಿಗೆ ಕಂಬನಿ ಉಕ್ಕಿಬಂದಿತು.

“ ಮಕ್ಕಳ ತಾಯಿ ಆಗುವುದಕ್ಕಿಂತಲೂ ನನ್ನ ಹಾಗೆ ಬಂಜೆಯಾಗಿರುವುದೇ ಲೇಸು ಕಣ್ರೀ.”

“ ಹಾಗೇಕನ್ನುವಿರಿ. ಸುಬ್ಬು, ರಾಮು, ಸೀತಾ ನಿಮ್ಮ ಮಕ್ಕಳಲ್ಲವೇ ? ”

“ ಯಾರ ಮಕ್ಕಳಾದರೂ ಚಿಂತೆಯಿಲ್ಲ—ತುಂಬ ಆಯುಸ್ಸು ಹೊತ್ತುಕೊಂಡು ಚೆನ್ನಾಗಿರಲಿ.”

ಕಮಲಾಕ್ಷಮ್ಮ ಭಾವನಾವಶರಾಗಿ ಒಳಗೆ ಎದ್ದುಹೋದರು.

ಸೀತೂ ಹಣೆಗಿಟ್ಟುಕೊಂಡು, ಹಜಾರಕ್ಕೆ ಬರಲು ನಾಗೂಬಾಯಿ,

" ಇಲ್ಲಿ ಬಾರೇ ಸೀತೂ " ಎಂದರು.

ಅವರ ಸಮೀಪಕ್ಕೆ ಬಂದ ಸೀತಾ,

" ಏನು ಚಿಕ್ಕಮ್ಮ " ಎಂದಳು.

" ಕುಕ್ಕರಿಸೇ—ನಾಳೆ ಗಂಡ ಬರುತ್ತಾನೆಂದು ನಿನಗೆಷ್ಟು ಜಂಬವೇ ? "

" ಹೋಗಿ—ಚಿಕ್ಕಮ್ಮ."

" ನಿನ್ನ ಗಂಡನೂ ಕಪ್ಪಗಿದ್ದರೆ ಏನು ಮಾಡುತ್ತೀಯೇ ಸೀತೂ–ನಿಮಗೆ ಹುಟ್ಟುವ ಮಕ್ಕಳೆಲ್ಲಾ ಚಿಗಳಿ ಗೊಂಬೆಗಳ ಹಾಗಿರುತ್ತವೆ."

" ನೀವು ಗೋಳುಹುಯ್ದುಕೊಂಡರೆ ನಾನು ಎದ್ದುಹೋಗಿ ಬಿಡ್ತೀನಿ ಚಿಕ್ಕಮ್ಮ."

" ತಮಾಷೆಗಂದೆ ಕಣೇ—ಏನೂ ಅಂದುಕೊಳ್ಳಬೇಡ."

" ........................................................ "

" ನಿಮ್ಮಮ್ಮ ನಿನಗೋಸ್ಕರ ತುಂಬ ಒದ್ದುಗೊಳ್ಳುತ್ತಿದ್ದಾರೆ ಸೀತೂ."

" ಹೌದ್ರೀ—ನಾನು ದಿನವೂ ಅವಳ ಪಕ್ಕದಲ್ಲಿಯೇ ಮಲಗಿಕೊಳ್ಳುತ್ತೇನೆ. ನನ್ನನ್ನು ಅಪ್ಪಿಕೊಂಡು, ಸುಮ್ಮನೆ ಕಣ್ಣೀರು ಹಾಕುತ್ತಾಳೆ. ' ಯಾಕಮ್ಮ ಅಳುತ್ತೀ ' ಎಂದು ಕೇಳಿದರೆ ಹೇಳುವುದಿಲ್ಲ."

" ಅವರ ದುಃಖ ಈಗ ನಿನಗೆ ಅರ್ಥವಾಗುವುದಿಲ್ಲ ಸೀತಾ—ಅರ್ಥವಾಗುವುದೂ ಬೇಡ. ಹೀಗೇ ನೀನು ಇನ್ನೂ ನಾಲ್ಕು ದಿವಸ ಆಡಿಕೊಂಡಿರು."

" ........................................................ "

" ಸುಬ್ಬೂ ಮೈಸೂರಿನಲ್ಲೇ ನಿಂತ. ರಾಮು ಪರೀಕ್ಷೆ ಮುಗಿದ ಮೇಲೆ ಎಲ್ಲಿಗೆ ಹೋಗುತ್ತಾನೋ ಏನೋ ? ನೀನು ಮದುವೆಯಾದ ಮೇಲೆ ಚಾಮರಾಜನಗರಕ್ಕೆ ಹೊರಟುಹೋಗುತ್ತೀ. ಹೋಗಬೇಕಾದದ್ದೇ—ಭಗವಂತ ಯಾರ ಅನ್ನ ಎಲ್ಲಿ ಇಟ್ಟಿದ್ದಾನೆಯೋ "

" ಅಮ್ಮ ಯಾವಾಗಲೂ ಸಂತೋಷವಾಗಿರಬೇಕೆಂದು ನನ್ನಾಸೆ. ಅದಕ್ಕೆ ನಾನು ಏನು ಮಾಡಬಹುದು ಚಿಕ್ಕಮ್ಮ."

“ ಅತ್ತೆಯನ್ನು ಒಳ್ಳೆಯವರನ್ನಾಗಿ ಮಾಡಿಕೊಂಡು, ನೀನು ಗಂಡನ ಜತೆ ಚೆನ್ನಾಗಿ ಬಾಳಿದರೆ ಸಾಕು–ಕಮಲಾಕ್ಷಮ್ಮ ಅದಕ್ಕಿಂತ ಹೆಚ್ಚಿನದೇನನ್ನೂ ನಿನ್ನಿಂದ ಅಪೇಕ್ಷಿಸುವುದಿಲ್ಲ.”

ಸ್ವಲ್ಪ ಹೊತ್ತು ಯೋಚಿಸಿದ ಸಿತಾ,

“ ಅಮ್ಮನಿಗೆ ನಾನು ದುಃಖ ಕೊಡುವುದಿಲ್ರೀ ” ಎಂದಳು.

ನಾಗೂಬಾಯಿ ಅವಳ ಮುಖ ನೇವರಿಸಿ,

“ ಸಂಪಿಗೆಮರದಲ್ಲಿ ಕಣಗಿಲೆ ಹೂ ಬಿಡುವುದಿಲ್ಲ ಸೀತಾ ” ಎಂದರು.

# ೧೪

ಗುರುವಾರ ಮಧ್ಯಾನ್ಹ ರಾಮಸ್ವಾಮಿ, ಅಚ್ಚಮ್ಮನವರನ್ನೂ, ಶ್ರೀನಿವಾಸ ಮೂರ್ತಿಯನ್ನೂ ಕರೆದುಕೊಂಡು ಬಂದಿಳಿದ.

ಯೋಗಾನರಸಿಂಹಯ್ಯ, ಕಮಲಾಕ್ಷಮ್ಮ ಅತಿಥಿಗಳನ್ನು ಸ್ವಾಗತಿಸಿದರು.

ಯೋಗಾನರಸಿಂಹಯ್ಯ ತಮ್ಮ ಭಾವೀ ಅಳಿಯನೊಂದಿಗೆ ಮಾತನಾಡುತ್ತ ಕುಳಿತುಕೊಂಡರು.

ಅಚ್ಚಮ್ಮನವರು ಸ್ನಾನಕ್ಕೆ ಹೋದರು.

ಕಮಲಾಕ್ಷಮ್ಮ ಎರಡು ಕಫ್ ಕಾಫಿ ಮಾಡಿ ರಾಮಸ್ವಾಮಿ ಕೈಗಿತ್ತರು. ರಾಮಸ್ವಾಮಿ ಕಾಫಿ ತೆಗೆದುಕೊಂಡು ಹೋಗಿ ಶ್ರೀನಿವಾಸಮೂರ್ತಿಗೆ ಕೊಟ್ಟು ಬಂದ.

" ನಗರ ಎಷ್ಟು ಹೊತ್ತಿಗೆ ಮುಟ್ಟಿದೆ."

" ಸುಬ್ಬೂ ಮಾವ ಕಾರು ಕೊಟ್ಟಿರಮ್ಮಾ. ನಾನು ರಾತ್ರಿಯೇ ನಗರಕ್ಕೆ ಹೋಗಿ, ಬೆಳಿಗ್ಗೆ ಅಷ್ಟು ಹೊತ್ತಿಗೇ ಅಚ್ಚಮ್ಮನವರನ್ನೂ, ಶ್ರೀನಿವಾಸಮೂರ್ತಿ ಯನ್ನೂ ಕರೆದುಕೊಂಡು ಮೈಸೂರಿಗೆ ಬಂದು, ರೈಲು ಹತ್ತಿದೆ."

" ಸುಬ್ಬೂ ಹೇಗಿದ್ದಾನೆ."

" ಚೆನ್ನಾಗಿದ್ದಾನೆ. ಪರೀಕ್ಷೆಗೋಸ್ಕರ ತುಂಬ ಓದುತ್ತಿದ್ದಾನೆ."

" ನಿಮ್ಮ ಭಾವನನ್ನು ನೋಡಿ ನಿನಗೇನನ್ನಿಸಿತು."

" ಒಳ್ಳೆಯ ಮನುಷ್ಯನ ಹಾಗೆ ಕಾಣುತ್ತಾನೆ."

" ಅಚ್ಚಮ್ಮನವರು ? "

" ಕೊಂಚ ಮುಂಗೋಪದವರ ಹಾಗೆ ಕಾಣುತ್ತಾರೆ. ವಿಪರೀತ ಮಡಿ."

" ನಗರದಲ್ಲಿ ಇವರ ಮನೆ ಚೆನ್ನಾಗಿದೆಯೇ ? "

"ಬಾಡಿಗೆ ಮನೆ—ತಕ್ಕಮಟ್ಟಗಿದೆ."

"ಶ್ರೀನಿವಾಸಮೂರ್ತಿ ನೋಡಿ ಸುಬ್ಬೂ ಏನಂದ ?"

"ಏನೂ ಅನ್ನಲಿಲ್ಲ."

"ಇಲ್ಲಿಗೆ ಯಾವಾಗ ಬರುತ್ತಾನೆ—ಕೇಳಲಿಲ್ಲವೇ ?"

"ಕೇಳಿದೆ. ಪರೀಕ್ಷೆ ಮುಗಿಸಿಕೊಂಡು ಬರುತ್ತೇನೆ ಎಂದ."

"ಅಡಿಗೆಯಾಗಿದೆ. ನಿಮ್ಮ ತಂದೆಯನ್ನೂ ಶ್ರೀನಿವಾಸಮೂರ್ತಿಯನ್ನೂ ಊಟಕ್ಕೆ ಎಬ್ಬಿಸು."

ಅಚ್ಚಮ್ಮನವರು ಸ್ನಾನಮುಗಿಸಿಕೊಂಡು ಒಳಗೆ ಬರಲು ರಾಮಸ್ವಾಮಿ ಎದ್ದು ಹೊರಗೆ ಹೋದ.

ಊಟ ಮುಗಿದ ಮೇಲೆ ರಾಮಸ್ವಾಮಿ, ಶ್ರೀನಿವಾಸಮೂರ್ತಿಯನ್ನು ತನ್ನ ರೂಮಿಗೆ ಕರೆದುಕೊಂಡು ಹೋದ.

ಅಚ್ಚಮ್ಮನವರು ಊಟ ಮುಗಿಸಿ, ಸೀತನನ್ನು ಹತ್ತಿರ ಕರೆದು ಕೂಡಿಸಿ ಕೊಂಡು ಪರೀಕ್ಷಿಸಿ ನೋಡಿದರು.

ಸಂಜೆ ಪದ್ಮನಾಭರಾಯರು, ನಾಗೂಬಾಯಿ ಬರಲು ವಿಧ್ಯುಕ್ತವಾಗಿ 'ಕನ್ಯಾಪ್ರದರ್ಶನ'ವಾಯಿತು.

ಕಮಲಾಕ್ಷಮ್ಮ ಅವರಿಬ್ಬರನ್ನೂ ಊಟಕ್ಕೆ ಎಬ್ಬಿಸಿದರು.

ಈ ಮಧ್ಯೆ ಸ್ವಲ್ಪ ಅವಕಾಶ ಕಲ್ಪಿಸಿಕೊಂಡ ಅಚ್ಚಮ್ಮನವರು ಮಗನನ್ನು ಹೊರಗೆ ಕರೆದೊಯ್ದು,

"ಹುಡುಗಿಯನ್ನು ನೋಡಿದೆಯಾ ಮೂರ್ತಿ ?"

"ನೋಡಿದೆ."

"ಹೇಗಿದ್ದಾಳೆ."

"ತಕ್ಕಮಟ್ಟಗಿದ್ದಾಳೆ."

"ಕಪ್ಪಲ್ಲವೇನೋ ?"

"ಬಣ್ಣ ಕಟ್ಟಿಕೊಂಡು ಏನಮ್ಮ ಮಾಡುವುದು. ಗುಣ ಮುಖ್ಯ."

"ಅವಳ ಗುಣ ನಿನಗೆ ಇಷ್ಟು ಬೇಗ ಹೇಗೆ ಗೊತ್ತಾಯಿತು ?"

"ಮನೆತನ ನೋಡಿದರೆ ಗೊತ್ತಾಗಲ್ಲವೇ ? ರಾಮಸ್ವಾಮಿ ಚಿನ್ನದಂಥ ಹುಡುಗ. ತನ್ನ ಮನೆಯ ವಿಷಯ ನಿಸ್ಸಂಕೋಚವಾಗಿ ನನಗೆ ವಿವರಿಸಿದ."

" ರಾಮಸ್ವಾಮಿ ಮೇಲಿನ ಪ್ರೀತಿಗೆ ನೀನು ಈ ಹುಡುಗಿಯನ್ನು ಕಟ್ಟಿಕೊಳ್ಳುವ ಹಾಗೆ ಕಾಣುತ್ತದೆ."

" ಹಾಗಲ್ಲಮ್ಮಾ—ದೊಡ್ಡ ಮನೆತನದಲ್ಲಿ ಬೆಳೆದ ಹುಡುಗಿ ನಮ್ಮ ಕಷ್ಟ ಸುಖ ನೋಡಿಕೊಂಡು ಹೊಂದಿಕೊಂಡು ಹೋಗತ್ತೆ."

" ಇವರು ಹೆಚ್ಚು ಅನುಕೂಲಸ್ಥರ ಹಾಗೆ ಕಾಣುವುದಿಲ್ಲ."

" ತಕ್ಕಮಟ್ಟಿಗಿದ್ದಾರೆ—ಉಣ್ಣುವುದಕ್ಕೆ ಉಡುವುದಕ್ಕೆ ಕೊರತೆಯಿಲ್ಲ. ಇಬ್ಬರು ಮಕ್ಕಳನ್ನು ಕಾಲೇಜಿನಲ್ಲಿ ಓದಿಸಿದ್ದಾರೆ."

" ಆ ರಾಮಸ್ವಾಮಿ—ನಿನಗೆ ಸೊಗಸಾದ ಮಕಮಲ್ ಟೋಪಿ ಹಾಕಿದ್ದಾನೆ."

" ಹೋಗಲಿ—ನಿನ್ನ ಮನಸ್ಸಿನಲ್ಲೇನಿದೆ—ಸ್ಪಷ್ಟವಾಗಿ ಹೇಳು."

" ಇನ್ನೂ ಒಂದೆರಡು ಕಡೆ ನೋಡೋಣ."

" ಕಂಡವರ ಮನೆಗೆ ಕನ್ಯಾನೋಡುವ ನೆಪಮಾಡಿಕೊಂಡು ಹೋಗಿ ಬಿಟ್ಟಿ ಕಾಫಿ ತಿಂಡಿ ಗಿಟ್ಟಿಸುವುದಕ್ಕೆ ನನಗಿಷ್ಟವಿಲ್ಲ. ಯೋಗಾನರಸಿಂಹಯ್ಯನವರಿಗೆ ನಾವು ಏನಾದರೂ ಸ್ಪಷ್ಟವಾಗಿ ಹೇಳುವುದು ಒಳ್ಳೆಯದು."

" ಅವರಿಗಿಂತ ನಿನಗೇ ಅವಸರವಾಗಿದೆಯಲ್ಲ ! "

" ಅಮ್ಮ, ಹೆಣ್ಣು ಹೆತ್ತವರ ಕಷ್ಟ ನಿನಗೆ ಗೊತ್ತಿಲ್ಲವೇ ? "

" ಗೊತ್ತಿದೆ—ಊರಿಗೆ ಹೋಗಿ ಕಾಗದ ಬರೆಯೋಣ."

ಹೆಚ್ಚು ಮಾತು ಬೆಳಸಿದರೆ ತಾಯಿ ' ಮುರುತು 'ಕೊಳ್ಳಬಹುದೆಂದು ಹೆದರಿದ ಶ್ರೀನಿವಾಸಮೂರ್ತಿ,

" ಹಾಗೇ ಆಗಲಿ " ಎಂದ.

ಶ್ರೀನಿವಾಸಮೂರ್ತಿಗೆ ರಜಾ ಇಲ್ಲದಿದ್ದುದರಿಂದ ಅವನು ಮಾರನೆಯ ಬೆಳಿಗ್ಗೆ ಹೊರಡಲೇಬೇಕಾಯಿತು.

" ಊರಿಗೆ ಹೋದ ಮೇಲೆ ನಮ್ಮ ಹುಡುಗನ ಜತೆ ಮಾತನಾಡಿ ತಿಳಿಸುತ್ತೇನೆ ಕಮಲಾಕ್ಷಮ್ಮ "

ಎಂದು ಅಚ್ಚಮ್ಮ ಹೇಳಿದರು.

ಅಚ್ಚಮ್ಮನವರನ್ನೂ ಶ್ರೀನಿವಾಸಮೂರ್ತಿಯನ್ನೂ ರೈಲಿಗೆ ಕಳಿಸಲು ಅವರೊಂದಿಗೆ ಶ್ರೀನಿವಾಸಮೂರ್ತಿ ಹೊರಟ.

ಅಚ್ಚಮ್ಮನವರು ಗಾಡಿಯಲ್ಲಿ ಕುಳಿತರು.

ರೈಲು ಹೊರಡಲು ಇನ್ನೂ ಹತ್ತು ನಿಮಿಷಗಳಿದ್ದವು.

ಶ್ರೀನಿವಾಸಮೂರ್ತಿ, ರಾಮಸ್ವಾಮಿ ಗಾಡಿಯ ಬಳಿ ಮಾತನಾಡುತ್ತ ನಿಂತರು.

" ನಿಮ್ಮ ಪರಿಚಯ, ಸ್ನೇಹವಾದದ್ದು ನನಗೆ ತುಂಬ ಸಂತೋಷ ರಾಮಸ್ವಾಮಿ."

" ಈ ಸ್ನೇಹ ಬೆಳೆಯಬೇಕೆಂದು ನನ್ನ ಅಪೇಕ್ಷೆ."

" ನನ್ನದೂ ಅದೇ ಅಪೇಕ್ಷೆ."

" ಊರಿಗೆ ಹೋದ ಕೂಡಲೆ ಕಾಗದ ಬರೆಯುವಿರಾ ? "

" ಖಂಡಿತ ಬರೆಯುತ್ತೇನೆ."

" ಉತ್ತರ........................! "

ಶ್ರೀನಿವಾಸಮೂರ್ತಿ ರಾಮಸ್ವಾಮಿಯ ಕೈಹಿಡಿದು,

" ನಿಮ್ಮ ಮನೆಯವರನ್ನು ನೋಡಿ ನನಗೆ ತುಂಬ ಸಂತೋಷವಾಗಿದೆ. ನಿಮ್ಮ ತಂದೆ ಭೂಮಿತೂಕದ ಮನುಷ್ಯರು. ನಿಮ್ಮ ಬಾಂಧವ್ಯ ಮಾಡಲು ನಾನು ಉತ್ಸುಕನಾಗಿದ್ದೇನೆ. ನನ್ನ ತಾಯಿಗೆ ಸ್ವಲ್ಪ ಬಿಂಕ—ಬಿಗುಮಾನ ಬೇಕಾಗಿದೆ. ಕೇಳಿದ ಕೂಡಲೆ ಒಪ್ಪಿಕೊಂಡಹಾಗಿರಬಾರದು. ನೀವು ನಿರಾತಂಕವಾಗಿರಿ. ಇನ್ನು ಒಂದೆರಡು ದಿನಗಳಲ್ಲಿ ಒಳ್ಳೆಯ ಸುದ್ದಿಯನ್ನೇ ಕೇಳುತ್ತೀರಿ."

ರಾಮಸ್ವಾಮಿಗೆ ಅಪಾರ ಆನಂದವಾಯಿತು.

ತುಂಬಿದ ಹೃದಯದಿಂದವನು,

" ಥ್ಯಾಂಕ್ಸ್ ಮೂರ್ತಿ " ಎಂದ.

## ೧೫

ಶ್ರೀನಿವಾಸಮೂರ್ತಿಗೆ ಹೆಣ್ಣು ಕೊಡುವವರಿಂದ ‘ ವರಶುಲ್ಕ ’ ಗಿಟ್ಟಿಸ ಬೇಕೆಂಬುದು ಅಚ್ಚಮ್ಮನವರ ಆಕಾಂಕ್ಷೆಯಾಗಿತ್ತು. ಆದರೆ ಮಾನಧನನಾದ ಮಗ ಅದಕ್ಕೊಪ್ಪುವುದಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು.

ಊರು ತಲುಪಿದ ಮಾರನೆಯ ದಿನವೇ ಶ್ರೀನಿವಾಸಮೂರ್ತಿ,

“ ಯೋಗಾನರಸಿಂಹಯ್ಯನವರಿಗೆ ಕಾಗದ ಬರೆಯಬೇಡವೇನಮ್ಮ ? ” ಎಂದು ಕೇಳಿದ.

“ ಬರೆದರಾಯಿತು—ಏನವಸರ ? ”

“ ಅವರು ಮುಂದಿನ ಸಿದ್ಧತೆ ಮಾಡಿಕೊಳ್ಳಬೇಡವೇ ? ”

“ ಆ ಸಂಬಂಧ ಬೇಡ—ಸ್ವಲ್ಪ ಅನುಕೂಲಸ್ಥರ ಸಂಬಂಧ ಮಾಡೋಣ ಸುಮ್ಮನಿರು. ಹುಡುಗಿ ಹೊಳೆದು ಬೆಳಗುತ್ತಿರುವುದೂ ಅಷ್ಟರಲ್ಲಿಯೇ ಇದೆ.”

“ ಅನುಕೂಲಸ್ಥರ ಮನೆ ಎಂದರೆ ಏನರ್ಥ ? ”

“ ಅಳಿಯ, ಮಗಳಿಗೆ ಕೈತುಂಬ ಕೊಡುವವರು ! ”

“ ಮಾವ ಕೊಡುವ ಹಂಗಿನ ಹಣದಿಂದ ನಾನು ಬದುಕಬೇಕೇನಮ್ಮ, ನಿನ್ನ ಮಗನಿಗೆ ಸಂಪಾದಿಸುವ ಯೋಗ್ಯತೆ ಇಲ್ಲವೆಂದು ಭಾವಿಸಿರುವೆಯಾ ? ”

“ ಹಾಗಲ್ಲವೋ ! ನನ್ನ ಸೊಸೆ ಬಿಚ್ಚೋಲೆ ಮುತ್ತೈದೆ ಆಗಿದ್ದರೆ ಏನು ಚೆನ್ನು ? ”

“ ಮುತ್ತೈದೆಗೆ ಬಿಚ್ಚೋಲೆಯೇ ಭೂಷಣ.”

“ ನಿನಗೆ ಏನು ಬೇಕೋ ಮಾಡಿಕೊಳ್ಳಪ್ಪ—ನನ್ನ ಕೇಳಬೇಡ.”

“ ನೀನು ಬೇಸರಪಟ್ಟುಕೊಳ್ಳುವ ಹಾಗಿದ್ದರೆ ನನಗೆ ಮದುವೆಯೇ ಬೇಡ.”

ಅಚ್ಚಮ್ಮನವರು ಸ್ವಲ್ಪ ಗಾಬರಿಯಾದರು.

ತಮ್ಮಂತೆಯೇ ಮಗನದೂ ಹಟದ ಸ್ವಭಾವ—ಅವನು ಬ್ರಹ್ಮಚಾರಿಯಾಗಿಯೇ ಉಳಿದರೆ ಏನು ಗತಿ—ವಂಶದ ಬೆಳವಣಿಗೆಯೇ ನಿಂತು ಹೋಗುವುದಲ್ಲಾ !

ಎಂದುಕೊಂಡು,

" ಸೀತನನ್ನು ಮದುವೆಯಾಗಲು ನಿಶ್ಚಯಿಸಿರುವೆಯಾ ಮೂರ್ತಿ—"

" ಹೂ."

" ಅವಳಲ್ಲಿ ಏನು ಕಂಡೆಯೋ ? "

" ಹೆಣ್ಣು ಬಾಳಿನ ಅನಂತ—ಅಪಾರ ವೇದನೆಯನ್ನು ! ಹಾಗೆ ನೊಂದ ಜೀವ ಉತ್ತಮ ಗೃಹಿಣಿಯಾಗಬಲ್ಲಳು ಎಂದು ನನ್ನ ಅಂತರಾತ್ಮ ಹೇಳುತ್ತಿದೆ. ಶ್ರೀಮಂತರ ಮನೆಯ ಹೆಣ್ಣುಗಳು, ಬಿ.ಎ., ಎಂ.ಎ. ಪಾಸುಮಾಡಿದ ಬಣ್ಣದ ಬೀಸಣಿಗೆಗಳು ನನಗೆ ಬೇಡ. ನಾನು ಬಡವ — ನನ್ನ ಬಡತನವನ್ನು ಗೌರವಿಸುತ್ತಾ ನನ್ನೊಂದಿಗೆ ಸೀತಾ ಬಾಳಬಲ್ಲಳು."

" ಋಣಾನುಬಂಧ ತಪ್ಪಿಸಲು ಯಾರಿಗೆ ಸಾಧ್ಯ. ನಾನು ಒಪ್ಪಿದ್ದೇನೆಂದು ಯೋಗಾನರಸಿಂಹಯ್ಯನವರಿಗೆ ಬರೆದುಬಿಡು " ಎಂದರು.

ಮೂರ್ತಿ ಯೋಗಾನರಸಿಂಹಯ್ಯನವರಿಗೆ ಬರೆಯಲಿಲ್ಲ; ರಾಮಸ್ವಾಮಿಗೆ ಬರೆದ.

ರಾಮಸ್ವಾಮಿ ಕಾಗದವನ್ನು ಒಡೆದು ನೋಡಿಕೊಂಡು ಉತ್ಸಾಹದಿಂದ ಒಳಗೆ ಬಂದು,

" ಅಮ್ಮ—ನಾನು ಹೇಳಲಿಲ್ಲವೇ ? ಮೂರ್ತಿ ಒಪ್ಪುತ್ತಾನೆಂದು ! ಕಾಗದ ಬರೆದಿದ್ದಾನಮ್ಮ."

ಕಮಲಾಕ್ಷಮ್ಮ ಆನಂದಭಾಷ್ಪ ಸುರಿಸುತ್ತಾ,

" ರಾಮೂ, ಒಂದು ಹೆಜ್ಜೆ ಹೋಗಿ, ಈ ಸುದ್ದಿಯನ್ನು ಪದ್ಮನಾಭರಾಯರಿಗೂ, ನಾಗೂಬಾಯಿಯವರಿಗೂ ತಿಳಿಸಿ ಬಾ. ಹಾಗೇ ಸುಬ್ಬುಗೂ ಒಂದು ಕಾಗದ ಬರೆದು ಹಾಕು "

ಎಂದು ಹೇಳಿದರು.

ಮಾರನೆಯ ದಿನವೇ ಕಮಲಾಕ್ಷಮ್ಮನವರು ದೇವರಿಗೆ ತುಪ್ಪದ ದೀಪ ಹಚ್ಚಿಟ್ಟು, ಮನೆಗೆ ಸಾಮಾನು ತರಿಸಿದರು.

ಮದುವೆಯ ಸಿದ್ಧತೆ ಹುರುಪಿನಿಂದ ಆರಂಭವಾಯಿತು.

ನಾಗೂಬಾಯಿಯವರು ಕಮಲಾಕ್ಷಮ್ಮನವರ ಬಲಭುಜವಾದರು.

ಒಂದು ದಿನ ಇಬ್ಬರೂ ಹಪ್ಪಳ ಒತ್ತುತ್ತ ಕುಳಿತಿದ್ದರು.

' ಬಡಿಸಿದರೆ ಎಲೆ ತುಂಬಿರಬೇಕು. ಉದ್ದು, ಅಕ್ಕಿ, ಹುರುಳಿ ಹಪ್ಪಳ, ಸಂಡಿಗೆ, ಬಾಳಕಗಳಿರಬೇಕು '

ಎಂದು ಸೂಚಿಸಿದ್ದವರೇ ನಾಗೂಬಾಯಿ.

ಹಪ್ಪಳ ಒತ್ತುತ್ತಿದ್ದ ನಾಗೂಬಾಯಿ,

" ಕಮಲಾಕ್ಷಮ್ಮ, ಸುಬ್ಬೂ ಪರೀಕ್ಷೆ ಇನ್ನೂ ಮುಗಿದಿಲ್ಲವೇ ? "

ಎಂದು ಕೇಳಿದರು.

" ಮುಗಿಯಿತಂತಮ್ಮ."

" ಅವನೂ ಶಾರದಾ ಒಂದು ಸಲವಾದರೂ ಇಲ್ಲಿಗೆ ಬರಬೇಡವೇ ? "

" ಕಾಗದ ಬರೆದಿದ್ದನಮ್ಮಾ—ಪರೀಕ್ಷೆಗೆ ಓದುವುದಕ್ಕೆ ರಜಾ ತೆಗೆದುಕೊಂಡನಂತೆ. ಕ್ಲಾಸಿನ ಪಾಠಗಳೆಲ್ಲಾ ಬಾಕಿ ಉಳಿದವಂತೆ–ಈಗ ಅವುಗಳನ್ನು ಮುಗಿಸುತ್ತಿದ್ದಾನಂತೆ ! "

" ಹಾಗಾದರೆ ಅವನು ಮದುವೆಗೇ ಬರುವುದು."

" ಹಾಗೇ ಕಾಣತ್ತೆ."

" ಮನೆಗೆ ಸೊಸೆ ಬಂದಳು. ನಿಮಗೆ ನೆರವಾಯಿತು ಎಂದು ಭಾವಿಸಿದ್ದೆ."

" ನನ್ನ ಕೈಕಾಲು ಗಟ್ಟಿಯಾಗಿರುವವರೆಗೆ ಭಯವಿಲ್ರೀ—ಹುಡುಗರು ಎಲ್ಲಿಯಾದರೂ ಚೆನ್ನಾಗಿರಲಿ."

" ಲೋಕವೂ ಒಂದಿದೆ ಎನ್ನುವುದನ್ನು ನಾವು ಮರೆಯಬಾರದು."

" ಏಕೆ ? "

" ಮದುವೆಯಾದ ಮೇಲೆ ನಿಮ್ಮ ಸೊಸೆ ಒಪ್ಪತ್ತು ಇಲ್ಲಿಗೆ ಬಂದಿಲ್ಲವೆಂದರೆ ಜನ ಆಡಿಕೊಳ್ಳೋದಿಲ್ಲವೇ ? "

" ಹೌದಮ್ಮ ಹೌದು—ಆಡಿಕೊಳ್ಳುತ್ತಾರೆ. ನಾನು ನಿರುಪಾಯಳಾಗಿದ್ದೇನೆ—ಏನು ಮಾಡಲಿ ಹೇಳಿ."

" ಈ ವರ್ಷ ರಾಮು ಪರೀಕ್ಷೆ ಮುಗಿದ ಮೇಲೆ ಅಣಿಯಾದ ಕಡೆ ನೋಡಿ ಅವನಿಗೂ ಮದುವೆ ಮಾಡಿಬಿಡಿ."

" ಒಂದೇ ವರ್ಷದಲ್ಲಿ ಮೂರು ಮದುವೆ ಮಾಡುವುದು ನಮ್ಮ ಯೋಗ್ಯತೆಯೇ ನಾಗೂಬಾಯಿ."

" ಒಂದು ಹೂವೆತ್ತಿದಂತೆ ನಡೆದುಹೋಯಿತು—ಎರಡನೆಯದೂ ಹಾಗೇ ಆಗುತ್ತದೆ. ದೇವರ ಮೇಲೆ ಭಾರ ಹಾಕಿ ಹೂ ಅನ್ನಿ."

" ನಾನು ಸಂಪಾದನೆ ಆರಂಭಿಸುವವರೆಗೆ ಮದುವೆಯಾಗಲ್ಲ ಎಂದು ರಾಮು ಹೇಳುತ್ತಿದ್ದಾನೆ."

" ಅವನನ್ನು ಒಪ್ಪಿಸಿದರಾಯಿತು."

" ನೀವುಗಳೆಲ್ಲಾ ಯೋಚನೆಮಾಡಿ—ಹೇಗೆ ಸೂಕ್ತವೋ ಹಾಗೆ ಮಾಡಿ. ಯಾವದೋ ಜನ್ಮದಲ್ಲಿ ನಾವು ಅಕ್ಕತಂಗಿಯರಾಗಿದ್ದೆವೆಂದು ಕಾಣುತ್ತದೆ. ಈ ಮನೆಗಾಗಿ ನಿಮ್ಮ ಜೀವ ತೇಯುತ್ತಿರುವಿರಿ ! "

" ಈ ಜನ್ಮದಲ್ಲಿಯೂ ನಾವು ಅಕ್ಕತಂಗಿ ಆಗಿದ್ದೀವ್ರೀ—ನೀವು ಅಕ್ಕ—ನಾನು ತಂಗಿ."

ಕಮಲಾಕ್ಷಮ್ಮ ಉತ್ತರಿಸಲೆತ್ನಿಸಲಿಲ್ಲ.

## ೧೬

ಪ್ರತಿದಿನ ವರ್ತಮಾನಪತ್ರಿಕೆಯಲ್ಲಿ ತನ್ನ ಪರೀಕ್ಷೆಯ ಫಲಿತಾಂಶ ಹುಡುಕುವುದೇ ಸುಬ್ಬುಕೃಷ್ಣನ ಹವ್ಯಾಸವಾಯಿತು.

ಅವನ ಆಂಹತಿ ಕಂಡ ಶಾರದಾ,

" ರಿಸಲ್ಟಿಗಾಗಿ ಏಕೆ ಇಷ್ಟು ತಹತಹಪಡುತ್ತಿರುವಿರಿ. ಬರುವ ಕಾಲಕ್ಕೆ ಬರುತ್ತದೆ—ಸುಮ್ಮನಿರಿ " ಎಂದಳು.

" ಇದರಲ್ಲಿ ನನಗೆ ಫೇಲಾದರೆ ಹುಚ್ಚು ಹಿಡಿದುಬಿಡುತ್ತದೆ ಶಾರದಾ."

" ಸುಖವಾಗಿರುವ ಕಾಲೇಜ್ ಕೆಲಸ ಬಿಟ್ಟು, ಈ ಸರ್ಕಾರಿ ನೌಕರಿಗೆ ಹೋಗಬೇಕೆಂದಿರುವಿರಿ—ಇದೆಂಥಾ ಹುಚ್ಚೋ ನಾನು ಕಾಣೆ."

" ಕಾಲೇಜಿನಲ್ಲಿ ಇನ್ನು ಹತ್ತು ವರ್ಷ ನಾನಿದ್ದರೂ ಅಸಿಸ್ಟೆಂಟ್ ಪ್ರೊಫೆಸರ್ ಕೂಡ ಆಗುವ ಹಾಗಿಲ್ಲ. ಎಂ.ಸಿ.ಎಸ್. ಮಾಡಿಕೊಂಡರೆ ಹತ್ತು ವರ್ಷಗಳಲ್ಲಿ ಡೆಪ್ಯುಟಿ ಕಮಿಷನರ್ ಆಗುತ್ತೇನೆ."

" ಏನಾದರೂ ಆಗಲಿ—ಧಾವಂತಪಡಬೇಡಿ " ಎಂದಳು.

ನಾಲ್ಕು ದಿನಗಳು ಕಳೆದವು.

ಐದನೆಯ ದಿನ ಬೆಳಿಗ್ಗೆ ಪತ್ರಿಕೆ ಹಂಚುವವನು ತಂದ ' ಪ್ರಜಾವಾಣಿ ' ಪತ್ರಿಕೆಯನ್ನು ಅವನ ಕೈಯಿಂದ ಕಸುಗೊಂಡು, ಪುಟಗಳನ್ನು ತಿರುವಿಹಾಕಿದ. ಎಂಟನೆಯ ಪುಟದಲ್ಲಿ ಎಂ.ಸಿ.ಎಸ್. ಪರೀಕ್ಷೆಯ ಪಲಿತಾಂಶ ಪ್ರಕಟವಾಗಿತ್ತು.

ಸುಬ್ಬುಕೃಷ್ಣ ತನ್ನ ನಂಬರು ಹುಡುಕಿದ.

ಮೊದಲನೆಯ ಕ್ಲಾಸಿನಲ್ಲಿರಲಿಲ್ಲ. ಎರಡನೆಯ ಕ್ಲಾಸಿನಲ್ಲಿ ತನ್ನ ನಂಬರಿದ್ದುದನ್ನು ಕಂಡು, ಕುಣಿದಾಡುತ್ತ ಒಳಗೆ ಬಂದು,

" ಶಾರದಾ—ಗೆದ್ದೆ—ಪಾಸ್ " ಎಂದ.

" ಸದ್ಯ—ದೇವರು ದೊಡ್ಡವನು " ಎಂದಳು.

" ಮೊದಲು ಅಣ್ಣನಿಗೆ ವೈರ್‌ಮಾಡಿ ಬರುತ್ತೇನೆ "

ಎಂದು ಬಟ್ಟೆ ಧರಿಸಿ ಹೊರಟ.

ಸುಬ್ಬುಕೃಷ್ಣನ ಟೆಲಿಗ್ರಾಮ್ ಬಂದಾಗ, ಕಮಲಾಕ್ಷಮ್ಮ ದೇವರ ಪೂಜೆ ಮಾಡುತ್ತಿದ್ದರು.

ರಾಮಸ್ವಾಮಿ ಟೆಲಿಗ್ರಾಮ್ ಒಡೆದು ನೋಡಿ, ಒಳಗೆ ಹೋಗಿ,

" ಅಮ್ಮ—ಸುಬ್ಬೂ ಪಾಸಾದನಮ್ಮ " ಎಂದ.

ಕಮಲಾಕ್ಷಮ್ಮ ಹಿಡಿಹೂವೆತ್ತಿಕೊಂಡು ದೇವರ ಮೇಲಿಟ್ಟು,

" ದೇವರು ದೊಡ್ಡವನು ರಾಮು " ಎಂದರು.

" ಸುಬ್ಬು ಒಳ್ಳೆಯ ಅದೃಷ್ಟಶಾಲಿ ಕಣಮ್ಮ."

" ಹೌದಪ್ಪ—ಇನ್ನವನು ಕಾಲೇಜ್ ಬಿಡಬೇಕು."

" ಬಿಡಬೇಕು — ಟ್ರೇನಿಂಗಿಗೆ ಕಳಿಸುತ್ತಾರೆ — ಟ್ರೇನಿಂಗ್ ಮುಗಿದ ಮೇಲೆ ಅಸಿಸ್ಟೆಂಟ್ ಕಮಿಷನರ್ ಆಗಿ ಎಲ್ಲಿಗಾದರೂ ಹಾಕುತ್ತಾರೆ."

" ಸಂಬಳ ಎಷ್ಟು ಕೊಡುತ್ತಾರೋ ? "

" ಮುನ್ನೂರು ಐವತ್ತರಿಂದ ಆರಂಭ—ಸಾವಿರದೈನೂರವರೆಗೂ ಹೋಗಬಹುದು."

" ನಿನಗೂ ಹಾಗೊಂದು ಕೆಲಸ ಸಿಕ್ಕಿದರೆ..........."

" ಪಾಸ್ ಆದ ಕೂಡಲೆ ನಾನು ಕೆಲಸಕ್ಕೆ ಸೇರುತ್ತೇನೆ. ಆದರೆ ಸರ್ಕಾರಿ ಚಾಕರಿ ಬಹಳ ದಿವಸ ಮಾಡಲ್ಲಮ್ಮ."

" ಏನು ಮಾಡುತ್ತೀ ? "

" ಯಾರನ್ನಾದರೂ ಜತೆಗೆ ತೆಗೆದುಕೊಂಡು ಕಂಟ್ರ್ಯಾಕ್ಟ್ ಮಾಡುತ್ತೇನೆ."

" ಸರ್ಕಾರಿ ಚಾಕರಿ ಬಿಟ್ಟುಬಿಡುತ್ತೀಯಾ ? "

" ಅದರಲ್ಲಿ ಏನಿದೆಯಮ್ಮ ಗೋಪಾಳ — ಬರೀ ಗುಲಾಮಗಿರಿ. ಕಂಟ್ರ್ಯಾಕ್ಟ್ ಮಾಡಿದರೆ ತಿಂಗಳಿಗೆ ಸಾವಿರ, ಎರಡು ಸಾವಿರ ಸಂಪಾದಿಸಬಹುದು."

" ಅಷ್ಟು ದುಡ್ಡು ನಮಗೆ ಯಾಕೋ ರಾಮು ? "

“ ದುಡ್ಡಿಲ್ಲದಿದ್ದರೆ ಆಗುತ್ತದೆಯೇನಮ್ಮ.”

“ ನಿಮ್ಮ ತಂದೆ ನಡಸಿಕೊಂಡು ಬಂದಿಲ್ಲವೇ ? ”

“ ಅವರ ಕಾಲ ಚೆನ್ನಾಗಿತ್ತು—ಈಗ ಎಲ್ಲಾ ದುಬಾರಿ.”

“ ದುಡ್ಡು ಬೇಕು ನಿಜ ರಾಮು—ದುಡ್ಡಿಲ್ಲದೆ ಬದುಕುವುದಕ್ಕಾಗುವುದಿಲ್ಲ. ಆದರೆ ಮನುಷ್ಯ ದುಡ್ಡು—ದುಡ್ಡು ಎಂದು ಧಾವಂತಪಡಬಾರದು. ದುಡ್ಡು ಮಾಡುವ ರೋಗ ಹತ್ತಿಬಿಟ್ಟರೆ ಮನುಷ್ಯ ಬಾಳುವುದು ಕಷ್ಟವಾಗುತ್ತದೆ.”

“ ನಾನು ದುಡ್ಡಿನ ಬೆನ್ನು ಹತ್ತಲ್ಲಮ್ಮ—ದುಡ್ಡು ನನ್ನ ಬೆನ್ನು ಹತ್ತುವ ಹಾಗೆ ಮಾಡುತ್ತೇನೆ. ಶಂಕರನಾರಾಯಣರಾಯರ ಹತ್ತಿರ ದುಡ್ಡಿದೆ. ಅದರಿಂದ ಅವರಿಗಾಗಲಿ, ಲೋಕಕ್ಕಾಗಲಿ ಏನಮ್ಮ ಕಷ್ಟವಾಗಿರೋದು. ಹತ್ತು ಜನಕ್ಕೆ ಕೈಯೆತ್ತಿ ಕೊಡಬೇಕಾದರೆ ದುಡ್ಡು ಬೇಡವೇನಮ್ಮ ? ”

ಮಗನ ವ್ಯಾಖ್ಯೆ ಕೇಳಿ ತಾಯಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

“ ರಾಯರು ಮನೆಗೆ ಬೇಕಾಗುವಷ್ಟು ಹಾಲನ್ನಿಟ್ಟುಕೊಂಡು ಉಳಿದುದನ್ನು ಬಡಮಕ್ಕಳಿಗೆ ಹಂಚುತ್ತಾರಂತೆ, ನನ್ನ ಮಕ್ಕಳೂ ಹಾಗೆ ಇರುವುದಾದರೆ—ಅವರು ಕೇಳಿದಷ್ಟು ಹಣ ಕೊಡು ಸ್ವಾಮಿ ”

ಎಂದು ದೇವರ ಮೇಲೆ ಹೂವಿಟ್ಟರು.

# ೧೭

ಶಂಕರನಾರಾಯಣರಾಯರ ವರ್ಚಸ್ಸನ್ನು ಉಪಯೋಗಿಸಿಕೊಳ್ಳಲು ಸುಬ್ಬುಕೃಷ್ಣ ಸ್ವಲ್ಪವೂ ಅನುಮಾನಿಸಲಿಲ್ಲ. ಮೈಸೂರಿನಲ್ಲೇ ಅವನು ಟ್ರೇನಿಂಗ್ ಪಡೆಯುಬಹುದೆಂದು ಸರ್ಕಾರ ಆಜ್ಞೆ ಮಾಡಿತು.

ಬೆಂಗಳೂರಿಗೆ ಬಂದು ಹೋಗಬೇಕೆಂದು ರಾಮಸ್ವಾಮಿ ಕಾಗದ ಬರೆದಿದ್ದ. ಅದೇ ಕಾಗದದ ಕೆಳಗೆ ಕಮಲಾಕ್ಷಮ್ಮ ನಾಲ್ಕು ಪಂಕ್ತಿ ಬರೆದು 'ಒಂದೆರಡು ದಿನಗಳ ಮಟ್ಟಿಗಾದರೂ ಬಂದು ಹೋಗು' ಎಂದು ಮಗನನ್ನು ಒತ್ತಾಯ ಪಡಿಸಿದ್ದರು.

ಗಂಡ ಇತ್ತ ಕಾಗದವನ್ನು ನೋಡಿಕೊಂಡು ಶಾರದಾ,

"ಏನು ಉತ್ತರ ಬರೆಯುವಿರಿ ?" ಎಂದು ಕೇಳಿದಳು.

"ಏನು ಬರೆಯಲಿ ?"

"ನನಗೇನು ಗೊತ್ತು ?"

"ಎರಡು ದಿನವಾದರೂ ನಾವು ಹೋಗಿಬರಲೇಬೇಕು."

"ಹೋಗಿಬನ್ನಿ."

"ನೀನು ?"

"ನಾನೇಕೆ ?"

"ನೀನು ಬರದಿದ್ದರೆ ಅಮ್ಮ ತುಂಬ ಅಸಮಾಧಾನಪಟ್ಟುಕೊಳ್ಳುತ್ತಾಳೆ."

"ಶನಿವಾರ—ಭಾನುವಾರ ಹೋಗಿಬರೋಣ. ಕಾರ್ ತೆಗೆದುಕೊಂಡು ಹೋಗೋಣ"

ಎಂದು ತೀರ್ಪನ್ನಿತ್ತಳು.

ಮನೆಗೆ ಬಂದ ಮಗ—ಸೊಸೆಯನ್ನು ಕಮಲಾಕ್ಷಮ್ಮ ತೆರೆದ ಬಾಹುಗಳಿಂದ ಸ್ವಾಗತಿಸಿದರು.

" ಸೋಮವಾರ ಬೆಳಗ್ಗೆ ನಾವು ಹೊರಟುಬಿಡಬೇಕಮ್ಮ."

" ಎರಡೇ ದಿನಗಳಲ್ಲಿಯೇ ? "

" ಹೂ—ಈ ಟ್ರೇನಿಂಗ್ ಪೀರಿಯಡ್‌ನಲ್ಲಿ ರಜಾ ಕೊಡುವುದಿಲ್ಲ."

" ನಿನಗೆ ಹೇಗೆ ಬೇಕೋ ಹಾಗೆ ಮಾಡು."

" ಸೀತೂ ಮದುವೆ ಯಾವಾಗ ? "

" ವೈಶಾಖಕ್ಕೆ."

" ಇನ್ನು ಮೂರೇ ತಿಂಗಳು ಉಳಿಯಿತು."

" ಹೂ."

' ಹಣಕಾಸಿಗೇನು ಮಾಡಿಕೊಂಡಿರುವಿರಿ ' ಎಂದು ಮಗ ಕೇಳಲಿಲ್ಲ—ತಾಯಿ ತಾವಾಗಿಯೇ ಹೇಳಲಿಲ್ಲ.

ಅತ್ತಿಗೆ ಬಂದಳೆಂದು ಸೀತಾ ಸಂಭ್ರಮಪಟ್ಟಳು. ಆದರೆ ಶಾರದಾ ಯಾವ ಪ್ರತಿಕ್ರಿಯೆಯನ್ನೂ ತೋರಿಸಲಿಲ್ಲ.

ಗಂಡ, ಹೆಂಡತಿ ರೂಮುಬಿಟ್ಟು ಹೊರಗೇ ಬರುತ್ತಿರಲಿಲ್ಲ.

ಕಾಲಕಾಲಕ್ಕೆ ಅವರಿಗೆ ತಿಂಡಿ, ಕಾಫಿಯನ್ನು ಕಮಲಾಕ್ಷಮ್ಮ ಸೀತನ ಕೈಯಲ್ಲಿ ಕಳಿಸುತ್ತಿದ್ದರು.

ಸಂಜೆಯಾದ ಕೂಡಲೆ ಗಂಡ, ಹೆಂಡತಿ ಡ್ರೈವ್ ಹೊರಟುಬಿಡುತ್ತಿದ್ದರು.

ಅಣ್ಣನಲ್ಲಾಗಿದ್ದ ಮಾರ್ಪಾಡನ್ನು ರಾಮಸ್ವಾಮಿಯೂ ಗಮನಿಸಿದ್ದ.

ಶನಿವಾರ ಕಳೆದೇ ಹೋಯಿತು.

ಭಾನುವಾರ ರಾತ್ರಿ ಸುಬ್ಬುಕೃಷ್ಣ, ಶಾರದಾ ಡ್ರೈವ್‌ನಿಂದ ಹಿಂದಿರುಗಿದ ಮೇಲೆ, ಕಮಲಾಕ್ಷಮ್ಮ ಮಗನನ್ನು ಅಡಿಗೆಯ ಮನೆಗೇ ಬರಮಾಡಿಕೊಂಡು,

" ನಾಳೆ ಬೆಳಿಗ್ಗೆ ನೀನು ಹೊರಟುಬಿಡಬೇಕೇ ? "

" ಹೋಗಲೇ ಬೇಕಮ್ಮ."

" ಶಾರದಾ ನಾಲ್ಕು ದಿವಸ ಇಲ್ಲೇ ಇರಲಿ."

" ಅವಳ ವೀಣೆ ಪಾಠ ನಿಂತುಹೋಗುತ್ತದೆ."

" ನೀನು ಪುನಃ ಯಾವಾಗ ಬರುತ್ತೀ ? "

" ಸೀತೂ ಮದುವೆಗೆ ಬರಬೇಕಲ್ಲ."

" ಸರ್ಕಾರ ಕೇಳಿಕೊಂಡು ನೀನು ಇಲ್ಲಿಗೇ ಬರಲಾಗುವುದಿಲ್ಲವೇ ? "

" ನಾವು ಹೇಳಿದಂತೆ ಅವರು ಮಾಡುತ್ತಾರೇನಮ್ಮ."

" ಶಾರದನಿಗೆ ಒಂದು ಆರತಿ ಅಕ್ಷತೆಯನ್ನೂ ನಾನು ಇಟ್ಟುಕೊಳ್ಳಲಾಗಲಿಲ್ಲ."

" ಅದೆಲ್ಲಾ ಏನಮ್ಮ—ಯಾವಾಗಲಾದರೂ ಇಟ್ಟುಕೊಂಡರಾಯಿತು."

ಸೋಮವಾರ ಬೆಳಿಗ್ಗೆ ಸುಬ್ಬುಕೃಷ್ಣ, ಶಾರದಾ ಮೈಸೂರಿಗೆ ಪ್ರಯಾಣ ಬೆಳಸಿಯೇ ಬಿಟ್ಟರು.

ಕಮಲಾಕ್ಷಮ್ಮನವರ ಮನಸ್ಸು ಮಮ್ಮಲ ಮರುಗಿತು.

ಸೀತಾ ಒಂದು ಹಾಡನ್ನು ಗುಯ್‌ಗುಟ್ಟುತ್ತಿದ್ದುದನ್ನು ಕೇಳಿಸಿಕೊಂಡ ಕಮಲಾಕ್ಷಮ್ಮ,

" ಸೀತೂ—ಅದೇನೇ ಹಾಡು."

" ನಮ್ಮ ಪದ್ಯಪುಸ್ತಕದಲ್ಲಿದೆಯಮ್ಮ—ಬಹಳ ಚೆನ್ನಾಗಿದೆ."

" ಹೇಳು—ಕೇಳೋಣ."

" ಅಣ್ಣಯ್ಯನಾ ಹೆಂಡತಿ ಕಣ್ಣೀಗೆ ಒಳ್ಳೆಯವಳು
ಸುಣ್ಣಾದ ತಿಳಿನೀರ ಎಮ್ಮೆ ಹಾಲೆಂದು ಬಡಿಸ್ಯಾಳ ‖ "

" ಗಯ್ಯಾಳಿ—ಇಂಥ ಹಾಡೇನೇ ಹೇಳೋದು."

" ಇದರಲ್ಲಿ ತಪ್ಪೇನಿದೆ ? "

ರಾಮಸ್ವಾಮಿ ಬಂದು ತಂಗಿಯ ವಾದವನ್ನು ಸಮರ್ಥಿಸಿದ.

" ಸುಬ್ಬು ಯಾಕಮ್ಮ ಹೀಗಾದ ? "

" ಹೇಗಾದನೋ ? "

" ಆ ಅಚ್ಚರಿ ಹೆಂಡತಿ ಬಿಟ್ಟರೆ ಅವನಿಗೆ ಯಾರೂ ಬೇಡವಾಗಿದೆ."

" ಅವನು ಹೇಗಾದರೂ ಇದ್ದುಕೊಳ್ಳಲಿ—ಸುಮ್ಮನಿರಪ್ಪ."

" ಸೀತೂ ಮದುವೆ ವಿಷಯ ಏನು ಹೇಳಿದ."

" ಮದುವೆಗೆ ಬರುತ್ತೇನೆಂದ."

" ಮಹೋಪಕಾರವಾಯಿತು. ದುಡ್ಡುಕಾಸಿನ ವಿಷಯ................"

" ನಾನು ಕೇಳಲಿಲ್ಲ."

" ನೀನು ಕೇಳಬೇಕೇನಮ್ಮ. ಮನೆ ಸಂದರ್ಭ ಅವನಿಗೆ ಗೊತ್ತಿಲ್ಲವೇ ? "

" ಅವನಿಗೆ ಸಾವಿರಾರು ರೂಪಾಯಿ ಬರುತ್ತಿರುವುದು ಅಷ್ಟರಲ್ಲಿಯೇ ಇದೆ. ಅವನಾದರೂ ಎಲ್ಲಿಂದ ತರುತ್ತಾನೆ ರಾಮೂ."

" ಸಾಲಮಾಡಿ ಸಂಬಳದಲ್ಲಿ ತೀರಿಸುತ್ತ ಬರಲಿ."

" ಹೋಗಲಿ ಬಿಡಪ್ಪ—ದುಡ್ಡು ಕಾಸು ಒದಗಿದೆಯಲ್ಲ ! "

" ಸುಬ್ಬೂ ಹೀಗಾಗುತ್ತಾನೆಂದು ನಾನು ಕನಸುಮನಸಿನಲ್ಲಿಯೂ ಭಾವಿಸಿರಲಿಲ್ಲ. ಆ ಮಹಾರಾಣಿ ಅತ್ತಿಗೆಗೆ ಸೀತೂ ಎಂದರೆ ಕಸಕ್ಕಿಂತ ಕಡೆ. ನಾವು ಬಡವರಿರಬಹುದಮ್ಮ—ಆದರೆ ಆತ್ಮಗೌರವ ನೀಗಿಕೊಂಡಿಲ್ಲ. ನನಗಿರುವವಳು ಒಬ್ಬ ತಂಗಿ—ಅವಳನ್ನು ಅಸಡ್ಡೆಯಿಂದ ಕಾಣಲು ನಾನು ಯಾರಿಗೂ ಅವಕಾಶ ಕೊಡುವುದಿಲ್ಲ."

ಈ ಮಾತಿಗೆ ನೀನು ಸುಬ್ಬೂ ಜತೆ ಜಗಳಕಾಯುತ್ತೀರಾ ? "

" ಕಾಯಬೇಕಾಗಿ ಬಂದರೆ ಕಾಯುತ್ತೇನೆ."

" ರಾಮೂ—ನೀನೂ ಸುಬ್ಬೂ ನನ್ನ ಎರಡು ಕಣ್ಣುಗಳು. ಯಾವ ಕಣ್ಣಿಗೆ ಬೇನೆ ಬಂದರೂ ಹಿಂಸೆಯಾಗುವುದು ನನಗೆ ! "

" ಸುಬ್ಬು ನನ್ನನ್ನಾಗಲಿ ಸೀತನನ್ನಾಗಲಿ ಉದ್ಧಾರಮಾಡಬೇಕಾಗಿಲ್ಲಮ್ಮ. ತಮ್ಮ, ತಂಗಿ ಎನ್ನುವ ಅಭಿಮಾನ ಬೇಡವೇ ? ಸುಬ್ಬು, ಅತ್ತಿಗೆಮ್ಮ ಪ್ರೀತಿಯಾಗಿದ್ದಾರೆ—ಇರಲಿ—ನಾನು ಬೇಡವೆಂದೆನೆ ! ಹೆತ್ತ ತಾಯಿಗಿಂತಲೂ ನಿನ್ನೆ ಕೈಹಿಡಿದ ಹೆಂಡತಿ ಹೆಚ್ಚೇ ? "

" ಹೆಂಡತಿ, ಕಂಡವರ ಮನೆ ಮಗು ಕಣಪ್ಪಾ—ಆದರ ಮನಸ್ಸು ನೋಯಿಸಬಾರದು. ಹೆಣ್ಣುಮಕ್ಕಳು ಕಣ್ಣೀರು ಹಾಕಿದರೆ ಮನೆಗೆ ಅಶ್ರೇಯಸ್ಸು."

" ನಿಜ ನಿಜ—ತಾಯಿಯ ಕಣ್ಣೀರು ಅಗ್ಗದ ವಸ್ತು—ಅದಕ್ಕೆ ಯಾವ ಬೆಲೆಯೂ ಇಲ್ಲ "

ಎಂದು ಅಲ್ಲಿ ನಿಲ್ಲದೆ ಹೊರಟುಬಿಟ್ಟ.

## ೧೮

ಸುಬ್ಬುಕೃಷ್ಣ ಅವನ ಹೆಂಡತಿ ಬಂದುಹೋದ ರೀತಿ, ಅವರು ತೋರಿದ ಅಸೌಜನ್ಯ ನಾಗೂಬಾಯಿಯವರನ್ನೂ ಅಸಮಾಧಾನಗೊಳಿಸಿತು.

ಒಂದು ದಿನ ಗಂಡನ ಜತೆ ಮಾತನಾಡುತ್ತಾ,

" ಪಾಪ ! ಈ ಮಕ್ಕಳಿಗಾಗಿ ಕಮಲಾಕ್ಷಮ್ಮ ಜೀವ ತೇದರು. ಸುಬ್ಬು ಒಂದು ತೀರಾದ—ರಾಮು ಏನಾಗುತ್ತಾನೋ ? " ಎಂದರು.

" ಸುಬ್ಬು ಯಾರಿಗೂ ಹೊರೆಯಾಗದೆ, ತನ್ನ ಪಾಡಿಗೆ ನೆಮ್ಮದಿಯಾಗಿದ್ದಾನಲ್ಲಾ—ಅಷ್ಟೇ ಸಾಕು."

" ಮಕ್ಕಳು ವಯಸ್ಸಿಗೆ ಬಂದ ಮೇಲೆ ತಂದೆ, ತಾಯಿ, ತಮ್ಮ, ತಂಗಿಯರನ್ನು ನೋಡಿಕೊಳ್ಳಬೇಡವೇ ? "

" ನಮ್ಮನ್ನು ನೋಡಿಕೊಳ್ಳುವುದಕ್ಕೆ ಯಾರು ಇದ್ದಾರೆ ಹೇಳು."

" ಭಗವಂತ."

" ಅವನೇ ಎಲ್ಲರನ್ನೂ ನೋಡಿಕೊಳ್ಳುತ್ತಾನೆ. ನೀನು ಸುಬ್ಬೂ ವಿಷಯ ಕಮಲಾಕ್ಷಮ್ಮನವರ ಮುಂದೆ ಆಡಬೇಡ. ಮೊದಲೇ ನೊಂದಿರುವ ಅವರ ಮನಸ್ಸು ಮತ್ತಷ್ಟು ನೋಯುತ್ತದೆ."

" ನಾನೇಕೆ ಮಾತನಾಡಲಿ—ಅಲ್ಲಿ ನೋಡಿ, ಯಾರೋ ಬರುತ್ತಿದ್ದಾರೆ " ಎಂದು ಎದ್ದು ಒಳಗೆ ಹೋದರು.

ಕೂಲಿಯ ಕೈಯಲ್ಲಿ ಸಾಮಾನುಗಳನ್ನು ಹೊರೆಸಿಕೊಂಡು ಬಂದ ಆಗಂತುಕರನ್ನು ಪದ್ಮನಾಭರಾಯರು ಸ್ವಾಗತಿಸಿ,

" ಬಸ್ಸಿನಲ್ಲಿ ಬಂದಿರಾ ಸೀತಾರಾಮಯ್ಯನವರೇ ? "

ಎಂದು ಕೇಳಿದರು.

ಕೂಲಿಯನ್ನು ಕಳಿಸಿದ ಸೀತಾರಾಮಯ್ಯನವರು,

" ಹೂ—ಇವತ್ತು ಸ್ವಲ್ಪ ಕೋರ್ಟ್ ಕೆಲಸವಿತ್ತು. ಬಂದೆ."

" ನಿಮ್ಮನ್ನು ನೋಡಿ ಎಷ್ಟು ದಿನಗಳಾದವು."

" ಊರುಬಿಟ್ಟು ಕದಲುವುದೇ ಕಷ್ಟವಾಗಿದೆ. ನಾನು ಎಷ್ಟು ಬೇಡ ವೆಂದರೂ ಈ ವರ್ಷ ಮುನಿಸಿಪಾಲಿಟಿಯನ್ನು ನನ್ನ ಕೊರಳಿಗೆ ಕಟ್ಟಿದ್ದಾರೆ. ನಮ್ಮೂರಿನಲ್ಲಿ ಹೈಸ್ಕೂಲು ಇಲ್ಲ. ನನ್ನ ಅಧಿಕಾರಾವಧಿಯಲ್ಲಿ ಒಂದು ಹೈಸ್ಕೂಲ್ ಮಾಡಿಸಬೇಕು ಎಂದು ನಿರ್ಧರಿಸಿದ್ದೇನೆ. ನಾಳೆ ಮಂತ್ರಿಗಳನ್ನು ಭೆಟ್ಟಿಯಾಗಲು, ಊರಿನ ಪ್ರಮುಖರು ಬರುತ್ತಾರೆ."

" ಬಹಳ ಸಂತೋಷ ಸ್ವಾಮಿ. ಸ್ನಾನಮಾಡಿ. ಅಡಿಗೆಯಾಗಿದೆ— ಊಟಮಾಡೋಣ."

ಸೀತಾರಾಮಯ್ಯನವರು ಸ್ನಾನ ಮುಗಿಸಿಕೊಂಡು ಬರುವ ವೇಳೆಗೆ ನಾಗೂ ಬಾಯಿ ಎಲೆಗಳನ್ನು ಹಾಕಿ ಬಡಿಸಿದ್ದರು.

ಪದ್ಮನಾಭರಾಯರ ಜತೆ ಕುಳಿತು ಊಟ ಮುಗಿಸಿದ ಸೀತಾರಾಮಯ್ಯ, ಬಟ್ಟೆ ಹಾಕಿಕೊಂಡು,

" ಕೋರ್ಟಿಗೆ ಹೋಗಿ ಬರುತ್ತೇನೆ "

ಎಂದು ಹೇಳಿ ಹೋದರು.

ಪದ್ಮನಾಭರಾಯರು ವಿಶ್ರಮಿಸಿಕೊಂಡು ಎದ್ದು ' ಶ್ರೀ ಮಾಧ್ವವಿಜಯ ' ಓದುತ್ತ ಕುಳಿತರು.

ಐದು ಗಂಟೆಯ ವೇಳೆಗೆ ಹಿಂದಿರುಗಿದ ಸೀತಾರಾಮಯ್ಯ ಕೈಕಾಲು ಮುಖ ತೊಳೆದುಕೊಂಡು ಬಂದು ಪದ್ಮನಾಭರಾಯರ ಜತೆ ಮಾತನಾಡುತ್ತ ಕುಳಿತರು.

ನಾಗೂಬಾಯಿ ಹುಳಿಯವಲಕ್ಕಿ, ಗುಳ್ಳಪಾವಟೆ, ಕಾಫಿಯನ್ನು ತಂದು ಸೀತಾರಾಮಯ್ಯನವರಿಗೂ, ಪದ್ಮನಾಭರಾಯರಿಗೂ ಇತ್ತು,

" ನಾನು ಸ್ವಲ್ಪ ಕಮಲಾಕ್ಷಮ್ಮನವರ ಮನೆಗೆ ಹೋಗಿಬರುತ್ತೇನೆ " ಎಂದರು.

" ಹೋಗಿ ಬಾ."

ಉಪಾಹಾರ ಮುಗಿಸಿದ ಮೇಲೆ ಸೀತಾರಾಮಯ್ಯನವರು,

" ಸ್ವಾಮಿಕಾರ್ಯದ ಜತೆಗೆ, ಸ್ವಲ್ಪ ಸ್ವಕಾರ್ಯವನ್ನು ಇಟ್ಟುಕೊಂಡು ಬಂದಿದ್ದೇನೆ ಪದ್ಮನಾಭರಾಯರೇ."

" ಹೇಳಿ ಸ್ವಾಮಿ."

" ನನ್ನ ಮಗಳು ರತ್ನನಿಗೆ ಹದಿನೆಂಟು ತುಂಬಿ ಹತ್ತೊಂಭತ್ತು ನಡೆಯುತ್ತಿದೆ. ಇನ್ನೂ ಗಂಡು ಗೊತ್ತಾಗಿಲ್ಲ. ನನ್ನ ಹೆಂಡತಿ ಇದನ್ನು ಮನಸ್ಸಿಗೆ ಹಚ್ಚಿಕೊಂಡು ಕೊರಗುತ್ತಿದ್ದಾಳೆ."

" ಹುಡುಗಿ ಎಷ್ಟು ಓದಿದೆ ? "

" ನಮ್ಮೂರಿನಲ್ಲಿ ಹೈಸ್ಕೂಲ್ ಇಲ್ಲವೆಂದು ರತ್ನನನ್ನು ತುಮಕೂರಿನಲ್ಲಿ– ನನ್ನ ಷಡ್ಡುಕಂದಿರ ಮನೆಯಲ್ಲಿಟ್ಟು ಓದಿಸಿದೆ. ಹೋದವರ್ಷ ಎಸ್.ಎಸ್.ಎಲ್.ಸಿ. ಪಾಸಾಯಿತು. ಓದು ಸಾಕೆಂದು ಊರಿಗೆ ಕರೆಸಿಕೊಂಡೆವು."

" ವಯಃಸ್ಸಿಗೆ ಬಂದ ಮಗಳು ಮನೆಯಲ್ಲಿ ಕುಳಿತಿದ್ದರೆ ತಾಯಿಗೆ ವ್ಯಥೆಯಾಗುವುದು ಸಹಜ."

" ನಿಮಗೆ ತಿಳಿದ ಹಾಗೆ ನಮ್ಮ ಜನರ ಗಂಡುಗಳಿವೆಯೇ ? "

ಪದ್ಮನಾಭರಾಯರು ಯೋಚಿಸುತ್ತಾ,

" ಒಬ್ಬ ಸೊಗಸಾದ ಹುಡುಗ ಇದ್ದಾನೆ. ಆದರೆ ಅವನಿಗೆ ಈ ವರ್ಷ ಮದುವೆ ಮಾಡುತ್ತಾರೋ ಇಲ್ಲವೋ ಗೊತ್ತಿಲ್ಲ."

" ಹುಡುಗ ಏನು ಮಾಡುತ್ತಿದ್ದಾನೆ."

" ಈ ವರ್ಷ ಫೈನಲ್ ಇಯರ್ ಇಂಜನಿಯರಿಂಗಿಗೆ ಕೂಡುತ್ತಾನೆ."

" ಈ ವರ್ಷ ಮದುವೆ ಮಾಡಲ್ಲಾಂತೀರಾ ? "

" ವೈಶಾಖದಲ್ಲಿ ಈ ಹುಡುಗನ ತಂಗಿ ಮದುವೆ ನಿಶ್ಚಯವಾಗಿದೆ. ಒಂದೇ ವರ್ಷ ಎರಡು ಮದುವೆ ಮಾಡಲು ಹೇಗೆ ಸಾಧ್ಯ ? "

" ಅದನ್ನು ಮುಂದೆ ಯೋಚಿಸೋಣ ಸ್ವಾಮಿ. ಹುಡುಗನ ತಂದೆಯವರ ಹತ್ತಿರ ಪ್ರಸ್ತಾಪಮಾಡಿ ನೋಡಿ."

" ನನ್ನ ಹೆಂಡತಿ ಮನೆಗೆ ಬರಲಿ ತಡೆಯಿರಿ ? "

" ಹುಡುಗನ ತಂದೆ ಯಾರು ? "

" ಅಮಲ್ದಾರರಾಗಿದ್ದು ರಿಟೈರಾದರು. ನನ್ನ ಪರಮ ಸ್ನೇಹಿತರು— ಯೋಗಾನರಸಿಂಹಯ್ಯನವರು."

" ನೀವು ದೊಡ್ಡಮನಸ್ಸು ಮಾಡಿ ಈ ಕನ್ಯಾಸೆರೆ ಬಿಡಿಸಬೇಕು ಪದ್ಮನಾಭರಾಯರೇ. ಅವರಿಗೆ ಹೇಗೆ ಬೇಕೋ ಹಾಗೆ ಮದುವೆ ಮಾಡಿ ಕೊಡುತ್ತೇನೆ—ಇಲ್ಲೇ ಮದುವೆ ಮಾಡಿ ಎಂದರೆ ಅದಕ್ಕೂ ಸಿದ್ಧ."

" ನನ್ನ ಕೈಯಲ್ಲಿ ಏನಿದೆ ಸ್ವಾಮಿ—ದೇವರ ಮೇಲೆ ಭಾರ ಹಾಕಿ ಮಾಡುವ ಪ್ರಯತ್ನ ಮಾಡೋಣ" ಎಂದರು.

ಹೆಂಡತಿಯ ಸಲಹೆ ಕೇಳಿ ಈ ವಿಷಯ ಮುಂದುವರಿಸಲಿಚ್ಛಿಸಿದ ಪದ್ಮನಾಭರಾಯರು ನಾಗೂಬಾಯಿಯವರ ದಾರಿ ನೋಡುತ್ತ ಕುಳಿತರು.

ಏಳು ಗಂಟೆಗೆ ನಾಗೂಬಾಯಿ ಬರಲು,

" ಮದುವೆ ಅಣಿ ಹೇಗೆ ನಡೆದಿದೆ" ಎಂದು ಕೇಳಿದರು.

" ಆಗುತ್ತಾ ಇದೆ."

" ಇಲ್ಲಿ ಬಾ ನಾಗೂ "

ಎಂದವರನ್ನು ಹೊರಗೆ ಕರೆದೊಯ್ದು, ಸೀತಾರಾಮಯ್ಯನವರು ಪ್ರಸ್ತಾಪಿಸಿದ್ದ ವಿಷಯ ವಿವರಿಸಿದರು.

" ರಾಮೂಗೂ ಈ ವರ್ಷ ಮದುವೆ ಮಾಡಿ ಎಂದು ಯಾವ ಬಾಯಲ್ಲಿ ಹೇಳೋದೂಂದ್ರೆ."

" ನೋಡು ನಾಗೂ, ಸೀತಾರಾಮಯ್ಯನವರು ಈ ಊರಿನಲ್ಲಿ ಮದುವೆ ಮಾಡಲು ಸಿದ್ಧರಾಗಿದ್ದಾರೆ. ವೈಶಾಖದಲ್ಲಿ ಎರಡೂ ಆಗಿಹೋಗಲಿ. ಖರ್ಚೂ ಕಡಿಮೆಯಾಗುತ್ತದೆ. ಯೋಗಾ ಈ ಸಂಬಂಧ ಬೆಳಸಲಿ ಎಂದು ನಾನು ಹೇಳುವುದಕ್ಕೆ ಇನ್ನೂ ಒಂದು ಕಾರಣವಿದೆ."

" ಏನದು ? "

" ಸೀತಾರಾಮಯ್ಯನವರು ಈ ವರ್ಷ ತಮ್ಮ ಊರಿನಲ್ಲಿ ಹೈಸ್ಕೂಲ್ ಸ್ಥಾಪಿಸುತ್ತಾರೆ. ಶ್ರೀನಿವಾಸಮೂರ್ತಿಯನ್ನು ಅವರು ತೆಗೆದುಕೊಂಡರೆ ಅನುಕೂಲವಾಗುತ್ತದೆ. ಕಮಲಾಕ್ಷಮ್ಮನವರು ಆಗಾಗ್ಗೆ ಹೋಗಿ ಮಗಳನ್ನು ನೋಡಿಕೊಂಡು ಬರಬಹುದು."

" ನಿಮ್ಮ ಯೋಚನೆ ಚೆನ್ನಾಗಿದೆ. ನಾಳೆ ನಾನು ಕಮಲಾಕ್ಷಮ್ಮನವರ ಹತ್ತಿರ ಈ ವಿಷಯ ಪ್ರಸ್ತಾಪಿಸುತ್ತೇನೆ. ರಾಮು ನಮ್ಮ ಹುಡುಗ—ನಾವು ಹೇಳಿದ ಹಾಗೆ ಕೇಳುತ್ತಾನೆ. ನೀವು ಒಂದು ಕೆಲಸ ಮಾಡಿ."

" ಏನು ಹೇಳು."

" ಸೀತಾರಾಮಯ್ಯನವರಿಗೆ ಹೇಳಿ ಅವರ ಹೆಂಡತಿ, ಮಗಳನ್ನು ಇಲ್ಲಿಗೆ ಕರೆಸಿ. ದೇವರಿಚ್ಛೆಯಿದ್ದರೆ ನಿಶ್ಚಿತಾರ್ಥ ಆಗಿಹೋಗಲಿ."

" ತಡಿ. ಅವರನ್ನು ಕೇಳಿ ನೋಡುತ್ತೇನೆ."

ರಾಯರ ಸಲಹೆಯನ್ನಂಗೀಕರಿಸಿದ ಸೀತಾರಾಮಯ್ಯನವರು,

" ನಾಳೆಯೇ ಕರೆಸುತ್ತೇನೆ. ನನ್ನ ಭಾವಮೈದುನ ಅಲ್ಲೇ ಇದ್ದಾನೆ— ಅವನ ಜತೆ ನಮ್ಮ ಮನೆಯವರು ಬಂದುಬಿಡುತ್ತಾರೆ" ಎಂದರು.

೧೯

ಆನೇಕಲ್ಲಿನ ನಿಯೋಗಗೋಷ್ಠಿಯವರು ಹತ್ತು ಗಂಟೆಗೆ ಬಂದಿಳಿದರು.

ಸೀತಾರಾಮಯ್ಯನವರು ಅವರನ್ನು ಕರೆದುಕೊಂಡು ವಿದ್ಯಾಮಂತ್ರಿಗಳ ದರ್ಶನಕ್ಕೆ ಹೋದರು.

"ಸೀತಾರಾಮಯ್ಯನವರ ಮನೆಯವರು ಯಾವಾಗ ಬರುತ್ತಾರೆ?"

ಎಂದು ನಾಗೂಬಾಯಿ ಕೇಳಿದರು.

"ಸಂಜೆಗೆ ಬರಬಹುದು. ಮೂರು ನಾಲ್ಕು ಜನ ಬರುತ್ತಾರೆಂದು ಕಾಣುತ್ತದೆ. ನೀನೊಬ್ಬಳೇ ಹೇಗೆ ಪೂರೈಸುತ್ತಿ ನಾಗೂ."

"ಇನ್ನೂ ನಾಲ್ಕು ಜನ ಬರಲಿ—ಮಾಡುತ್ತೇನೆ. ನಾವು ಒಳ್ಳೆಯ ಕೆಲಸಕ್ಕೆ ಕೈ ಹಾಕಿದ್ದೇವೆ. ಅದನ್ನು ಸಂತೋಷವಾಗಿ ಮನಃಪೂರ್ವಕವಾಗಿ ಮಾಡೋಣ."

ರಾಯರ ಅಂತಃಕರಣ ಉಕ್ಕಿಬಂದಿತು.

"ನಾಗೂ, ನಿನಗೆ ಪುನರ್ಜನ್ಮ ಇಲ್ಲ ಕಣೇ."

"ಮಹಾರಾಯರು, ನಿಮ್ಮ ಕೈಹಿಡಿದ ದಿನವೇ ನಾನು ಜೀವನ್ಮುಕ್ತಳಾದೆ" ಎಂದರು.

ಒಂದು ಗಂಟೆಗೆ ಹಿಂದಿರುಗಿದ ಸೀತಾರಾಮಯ್ಯನವರು ಉತ್ಸಾಹದಿಂದ,

"ರಾಯರೇ, ನಿಮ್ಮ ದಯದಿಂದ ಹೋದ ಕೆಲಸ ಜಯವಾಯಿತು. ಇದೇ ಜೂನ್ ತಿಂಗಳಿಂದ ಹೈಸ್ಕೂಲ್ ಆರಂಭಿಸಿಬಿಡುತ್ತೇವೆ.—ಹಾಗೇ ನನ್ನ ಮನೆ ಕೆಲಸವನ್ನೂ ಆಗುಮಾಡಿಕೊಡಿಯಪ್ಪ."

"ಆಗತ್ತೆ ಸ್ವಾಮಿ—ಆಗತ್ತೆ—ಯೋಚಿಸಬೇಡಿ" ಎಂದರು.

ಸಂಜೆಯ ಬಸ್ಸಿನಲ್ಲಿ ಸೀತಾರಾಮಯ್ಯನವರ ಮಗಳು ರತ್ನಾ, ಹೆಂಡತಿ ರಾಜಮ್ಮ, ಭಾವಮೈದುನ ವೆಂಕಟಸುಬ್ಬಯ್ಯ ಬಂದಿಳಿದರು.

ರಾಜಮ್ಮನವರು ಬರಿಗೈಯಲ್ಲಿ ಬಂದಿರಲಿಲ್ಲ. ತೆಂಗಿನಕಾಯಿ, ಕೊಬ್ಬರಿ, ಬೆಲ್ಲ, ಬಾಳೆಯ ಗೊನೆಗಳನ್ನು ಹೊರಸಿಕೊಂಡೇ ಬಂದಿದ್ದರು.

ಎಲ್ಲರನ್ನೂ ನಾಗೂಬಾಯಿ ಸ್ವಾಗತಿಸಿ, ಉಪಚರಿಸಿದರು.

ಮಾರನೆಯ ಸಂಜೆ ಪದ್ಮನಾಭರಾಯರ ಮನೆಗೆ ಯೋಗಾನರಸಿಂಹಯ್ಯನವರನ್ನೂ ಅವರ ಕುಟುಂಬವರ್ಗದವರನ್ನೂ ಬರಮಾಡುವುದೆಂದು ನಿಶ್ಚಯವಾಯಿತು.

ನಾಗೂಬಾಯಿ ಎಲ್ಲರಿಗೂ ತಿಂಡಿ ಕಾಫಿ ಮಾಡಿಟ್ಟು, ಕಮಲಾಕ್ಷಮ್ಮನವರನ್ನು ಸ್ವಾಗತಿಸಿದರು.

ಗೆಳತಿಯ ಸಾಂಪ್ರದಾಯಕ ನಡೆವಳಿಕೆ ಕಂಡು ಅಚ್ಚರಿಗೊಂಡ ಕಮಲಾಕ್ಷಮ್ಮ,

"ಇದೇನು ನಾಗೂಬಾಯಿ, ಹೊಸಬರನ್ನು ಉಪಚರಿಸುವಂತೆ ನನ್ನನ್ನು ಉಪಚರಿಸುತ್ತಿರುವಿರಿ ?"

"ಹೌದಮ್ಮ—ಈಗ ನೀವು ಗಂಡಿನ ಕಡೆಯವರು. ಉಪಚಾರ ಮಾಡಲಿಲ್ಲ ಎಂದು ನೀವು ಮುರುತುಕೊಂಡರೆ ಏನು ಮಾಡುವುದು ?"

ಕಮಲಾಕ್ಷಮ್ಮ ನಕ್ಕು,

"ನಿಮ್ಮ ಮಾತಿಗಷ್ಟು.................." ಎಂದರು.

ನಾಗೂಬಾಯಿ, ಸೀತೆಯನ್ನು ಹತ್ತಿರ ಕರೆದು,

"ಸೀತೂ—ನೀನು ನನಗೆ ಸ್ವಲ್ಪ ಸಹಾಯಮಾಡು. ತಿಂಡಿ ಇಟ್ಟುಕೊಡುತ್ತೇನೆ. ಎಲ್ಲರಿಗೂ ತೆಗೆದುಕೊಂಡು ಹೋಗಿ ಕೊಡಮ್ಮ."

ನಾಗೂಬಾಯಿ, ಸೀತಾ ಒಳಗೆ ಹೋಗಲು ಕಮಲಾಕ್ಷಮ್ಮ,

"ರಾಜಮ್ಮನವರೇ ಈ ಪುಣ್ಯಾತ್ಗಿತ್ತಿ ನಮ್ಮ ಮನೆಗೆ ತಮ್ಮ ಜೀವ ತೇಯುತ್ತಿದ್ದಾರೆ. ಇವರ ಋಣ ನಾವು ಜನ್ಮಜನ್ಮಾಂತರಕ್ಕೂ ತೀರಿಸಲು ಸಾಧ್ಯವಿಲ್ರೀ."

"ಇಂಥವರ ದರ್ಶನವಾದ ದಿನವೇ ಸುದಿನ ಕಮಲಾಕ್ಷಮ್ಮನವರೇ."

ಉಪಾಹಾರ, ವಧೂವರರ ಪರಸ್ಪರ ದರ್ಶನ ಮುಗಿದ ಮೇಲೆ ನಾಗೂಬಾಯಿ, ರತ್ನನನ್ನು ಕಮಲಾಕ್ಷಮ್ಮನವರ ಬಳಿಗೆ ಕರೆತಂದು,

" ಈ ಮಗುವನ್ನು ರಾಮೂಗೆ ತಂದುಕೊಂಡು ಬಿಡಿ ಕಮಲಾಕ್ಷಮ್ಮ" ಎಂದರು.

" ನನ್ನದೇನಿದೆ ನಾಗೂಬಾಯಿ—ನೀವುಂಟು ನಿಮ್ಮ ರಾಮು ಉಂಟು. ಅವನು ಒಪ್ಪಿಬಿಟ್ಟರೆ ನಾನೂ ಅವರೂ ಚಕಾರಶಬ್ದ ವೆತ್ತುವುದಿಲ್ಲ."

" ರಾಮೂನ ಕೇಳಿಯೇ ಬಿಡ್ತೀನಿ."

" ಕೇಳಿ."

ನಾಗೂಬಾಯಿ ರಾಮಸ್ವಾಮಿಯನ್ನು ಹೊರಗೆ ಕರೆದೊಯ್ದು,

" ಹುಡುಗಿ ಹೇಗಿದೆಯೋ ?" ಎಂದು ಕೇಳಿದರು.

" ಚೆನ್ನಾಗಿದೆ."

" ಒಪ್ಪಿಗೆ ತಾನೆ !"

" ನನಗೆ ಮದುವೆಗೆ ಏನು ಅವಸರ ಚಿಕ್ಕಮ್ಮ."

" ರಾಮೂ, ನನ್ನ ಮಾತು ಕೇಳುತ್ತೀಯಾ ?"

" ನಿಮ್ಮ ಯಾವ ಮಾತು ನಾನು ಕೇಳಿಲ್ಲ. ಅಪ್ಪ ಅಮ್ಮನಿಗೆ ನಾನು ಭಾರವಾಗಿರುವುದು ಸಾಲದೇ ? ನನ್ನ ಹೆಂಡತಿಯನ್ನೂ ಅವರ ತಲೆಯ ಮೇಲೆ ಹಾಕಲೇ ?"

" ರಾಮು, ಈ ವರ್ಷ ನಿನಗೆ ಪಾಸಾಗುತ್ತಪ್ಪ—ಕೂಡಲೆ ಕೆಲಸವೂ ಸಿಕ್ಕತ್ತೆ. ನಿಮ್ಮಮ್ಮನಿಗೆ ಈ ಮಗು ಭಾರವಾಗುವುದಿಲ್ಲ. ನೋಡು—ನಿಮ್ಮಮ್ಮನ ಮನಸ್ಸಿನಲ್ಲಿ ಒಂದು ದುಃಖ ಇದೆ. ಸೊಸೆ ಮನೆಗೆ ಬಂದಾಳೇ—ಅವಳನ್ನು ಮುಚ್ಚಟೆಯಾಗಿ ಬಾಳಿಸಿಯೇನೇ ಎಂದವರು ಹಂಬಲಿಸುತ್ತಿದ್ದರು. ನಿಮ್ಮಣ್ಣ, ಶಾರದಾ ಅವರನ್ನು ನಿರಾಶೆಗೊಳಿಸಿದರು. ನಿನ್ನ ಹೆಂಡತಿ ಮನೆಗೆ ಬಂದರೆ ಕಮಲಾಕ್ಷಮ್ಮನವರ ಮನಸ್ಸು ಹಗುರವಾಗುತ್ತದೆ—ಅವರು ಇನ್ನೂ.... ಹತ್ತು....ವರ್ಷ...."

ನಾಗೂಬಾಯಿಯವರ ಕಣ್ಣುಗಳಿಂದ ಕೋಡಿ ಹರಿಯಿತು.

ರಾಮಸ್ವಾಮಿ ಗದ್ಗದಕಂಠನಾಗಿ,

" ಕಣ್ಣೀರು ಹಾಕಬೇಡಿ ಚಿಕ್ಕಮ್ಮ. ನೀವು ಏನು ಹೇಳಿದರೂ ಒಪ್ಪಿಕೊಳ್ಳಲು ಸಿದ್ಧನಾಗಿದ್ದೇನೆ" ಎಂದ.

ನಾಗೂಬಾಯಿ ಕಂಬನಿಯೊರಸಿಕೊಂಡು, ರಾಮಸ್ವಾಮಿ ಕೆನ್ನೆ ನೇವರಿಸಿ,

" ನೀವೆಲ್ಲಾ ದೇವರ ಮಕ್ಕಳು ರಾಮು. ನಿಮ್ಮ ಗುಣವೇ ನಿಮ್ಮನ್ನು ಕಾಪಾಡುತ್ತೆ "

ಎಂದು ಒಳಗೆ ಬಂದು ಸಂತೋಷದಿಂದ,

" ರಾಮು ಒಪ್ಪಿದ್ದಾನೆ ಕಮಲಾಕ್ಷಮ್ಮ " ಎಂದರು.

ಮಾರನೆಯ ದಿನ ' ಲಗ್ನಪತ್ರಿಕೆ 'ಯ ಶಾಸ್ತ್ರ ಮುಗಿಸಿಕೊಂಡು, ಸೀತಾರಾಮಯ್ಯನವರು ಸಂಸಾರದೊಂದಿಗೆ ಊರಿಗೆ ಪ್ರಯಾಣ ಬೆಳಸಿದರು.

## ೨೦

ಏಪ್ರಿಲ್ ತಿಂಗಳಲ್ಲಿ ರಾಮಸ್ವಾಮಿಯ ಪರೀಕ್ಷೆ ಮುಗಿಯಿತು. ತಂಗಿಯ ಮದುವೆಯ ವ್ಯವಸ್ಥೆಗೆ ಅವನು ಸಹಾಯಕನಾಗಿ ನಿಂತ.

ವೈಶಾಖ ಶುದ್ಧ ನವಮಿ ಸೀತನ ಮದುವೆ; ದಶಮಿ ರಾಮಸ್ವಾಮಿಯ ಮದುವೆ ಎಂದು ನಿಷ್ಕರ್ಷೆಯಾಗಿತ್ತು.

ಸೀತಾರಾಮಯ್ಯನವರು ಮೂರು ಸಾರಿ ಬೆಂಗಳೂರಿಗೆ ಬಂದು ಚತ್ರ ಗೊತ್ತುಪಡಿಸಿ, ಜವಳಿ ಜವಾಹಿರಿ ಖರೀದಿ ಮಾಡಿದರು.

ಎರಡು ಮದುವೆಗಳೂ ಸಜ್ಜನರಾಯರ ಕಲ್ಯಾಣಮಂಟಪದಲ್ಲಿಯೇ ನೆರವೇರುವುದೆಂದು ಇತ್ಯರ್ಥವಾಯಿತು.

ಬಿದಿಗೆಯ ದಿನವೇ ಸೀತಾರಾಮಯ್ಯನವರು ಪರಿವಾರ ಸಮೇತ ಬೆಂಗಳೂರಿಗೆ ಬಂದರು. ಸಪ್ತಮಿ ದಿನ ಅಚ್ಚಮ್ಮನವರು ಮಗನನ್ನೂ ಸಮೀಪ ಬಂಧುಗಳನ್ನೂ ಕರೆದುಕೊಂಡುಬಂದರು.

ಎರಡು ಮದುವೆಗಳ ಮೇಲ್ವಿಚಾರಣೆ ಪದ್ಮನಾಭರಾಯರು, ನಾಗೂ ಬಾಯಿಯವರಿಗೇ ಸೇರಿತ್ತು.

ಲಗ್ನದ ದಿನ ಬೆಳಿಗ್ಗೆ ಸುಬ್ಬುಕೃಷ್ಣ, ಶಾರದಾ, ಶಂಕರನಾರಾಯಣ ರಾಯರು, ಪದ್ಮಾವತಮ್ಮ ಆಗಮಿಸಿದರು.

ಗುರುಹಿರಿಯರ ಆಶೀರ್ವಾದದಿಂದ ಎರಡು ಲಗ್ನಗಳೂ ಯಶಸ್ವಿಯಾಗಿ ನೆರವೇರಿದವು.

ಏಕಾದಶಿಯ ದಿನ ಬೆಳಿಗ್ಗೆ ಸುಬ್ಬುಕೃಷ್ಣ ತನ್ನ ಅತ್ತೆ, ಮಾವ, ಹೆಂಡತಿ ಯೊಂದಿಗೆ ಪ್ರಯಾಣ ಬೆಳಸಿದ.

ದ್ವಾದಶಿಯ ದಿನ ಸೀತಾರಾಮಯ್ಯನವರು 'ಬೀಗರ ಔತಣ' ಏರ್ಪಡಿಸಿದರು.

ಊಟ ಮುಗಿಸಿ ಎಲ್ಲರೂ ತಾಂಬೂಲ ಸೇವಿಸುತ್ತ ಕುಳಿತಿದ್ದಾಗ ಪದ್ಮನಾಭರಾಯರು,

" ಸೀತಾರಾಮಯ್ಯನವರೇ, ಸೊಗಸಾಗಿ ಮದುವೆ ಮಾಡಿ, ಸೊಗಸಾದ ಊಟ ಹಾಕಿದಿರಪ್ಪಾ " ಎಂದರು.

" ಎಲ್ಲಾ ನಿಮ್ಮ ವಿಶ್ವಾಸ. ನೀವುಗಳು ಹಗಲೂ ರಾತ್ರಿ ಶ್ರಮಿಸದಿದ್ದರೆ ಲಗ್ನ ಇಷ್ಟು ಯಶಸ್ವಿಯಾಗಿ ನೆರವೇರುತ್ತಿತ್ತೇ ? "

" ಈ ಜೂನ್ ತಿಂಗಳಲ್ಲಿ ಹೈಸ್ಕೂಲ್ ಆರಂಭಿಸಿಬಿಡುತ್ತೀರಿ."

" ಓಹೋ—ಆರಂಭೋತ್ಸವಕ್ಕೆ ತಾವುಗಳೆಲ್ಲರೂ ದಯೆಮಾಡಿಸಬೇಕು."

" ಅಗತ್ಯವಾಗಿ ಆಗಲಿ. ಕಟ್ಟಡಕ್ಕೆ ಏನು ಮಾಡಿದಿರಿ ? "

" ಮಿಡ್ಲ್‌ಸ್ಕೂಲ್ ತೆಗೆದುಕೊಂಡಿದ್ದೇವೆ."

" ಮಿಡ್ಲ್‌ಸ್ಕೂಲ್."

" ಅದಕ್ಕೆ ಊರಿನವರು ಒಂದು ಕಟ್ಟಡ ದಾನಕೊಟ್ಟಿದ್ದಾರೆ."

" ಅಧ್ಯಾಪಕರನ್ನು ಗೊತ್ತುಮಾಡಿಯಾಯಿತೇ ? "

" ಆಗಿದೆ. ಆದರೆ ಸರಿಯಾದ ಹೆಡ್‌ಮಾಸ್ಟರ್ ಸಿಕ್ಕಿಲ್ಲ. ಒಬ್ಬರು ಅನುಭವಿಕರಿಗಾಗಿ ಹರತರದೂದು ಮಾಡುತ್ತಿದ್ದೇವೆ."

" ನಾನು ಹೆಡ್‌ಮಾಸ್ಟರ್ ಕೊಟ್ಟರೆ ತೆಗೆದುಕೊಳ್ಳುವಿರಾ ? "

" ಸಂತೋಷವಾಗಿ."

" ನಿಮ್ಮ ಬೀಗರು ಯೋಗಾನರಸಿಂಹಯ್ಯನವರ ಅಳಿಯ ಶ್ರೀನಿವಾಸ ಮೂರ್ತಿ ಎಲ್ಲ ರೀತಿಯಿಂದಲೂ ಅರ್ಹನಾಗಿದ್ದಾನೆ. ಚಾಮರಾಜನಗರದ ಹೈಸ್ಕೂಲಿನಲ್ಲಿ ಅವನಿಗೆ ಆರು ವರ್ಷ ಸರ್ವಿಸ್ ಆಗಿದೆ. ದಕ್ಷನೆಂದು ಹೆಸರು ಗಳಿಸಿದ್ದಾನೆ."

" ಅವರು ರಾಜೀನಾಮೆ ಕೊಟ್ಟು ನಮ್ಮ ಶಾಲೆಗೆ ಬರಲು ಸಿದ್ಧ ವಾಗಿರುವರೇ ? "

" ಅವನಿಂದ ರಾಜೀನಾಮೆ ಕೊಡಿಸುವ ಜವಾಬ್ದಾರಿ ನನಗಿರಲಿ."

" ನಾನು ಊರಿಗೆ ಹೋಗುವುದರೊಳಗಾಗಿ ಒಂದು ಅಪ್ಲಿಕೇಷನ್ ಬರೆಸಿ ಕೊಡಿ. ಕಮಿಟಿ ಮೆಂಬರುಗಳ ಜತೆ ಮಾತನಾಡಿ ತಿಳಿಸುತ್ತೇನೆ."

" ಶತಾಯ ಗತಾಯ ಇದನ್ನು ನೀವು ಸಾಧಿಸಬೇಕು ಸ್ವಾಮಿ."

“ನನ್ನ ಪ್ರಯತ್ನದಲ್ಲಿ ಯಾವ ಲೋಪವೂ ಬರುವುದಿಲ್ಲ ಪದ್ಮನಾಭ ರಾಯರೇ. ನಮ್ಮ ಬೀಗರ ಮಗಳು, ಅಳಿಯ ನಮ್ಮೂರಿಗೆ ಬಂದರೆ ನಮಗೂ ನೆರವಾಗುತ್ತದೆ” ಎಂದರು.

ನಾಗೂಬಾಯಿಯವರು ರಾಜಮ್ಮನವರಿಗೆ ಇದೇ ವಿಷಯ ತಿಳಿಸಿ,

“ನಿಮ್ಮ ಯಜಮಾನರು ಮರೆತು ಬಿಟ್ಟಾರು. ಅವರಿಗೆ ಜ್ಞಾಪಿಸಿ. ಸೀತೂ, ರತ್ನಾ ಒಂದೇ ಕಡೆ ಇದ್ದ ಹಾಗಾಗುತ್ತದೆ. ಇಬ್ಬರೂ ಓರಗೆಯವರು— ಚೆನ್ನಾಗಿರುತ್ತದೆ.”

“ಈ ಕೆಲಸ ಆಗತ್ತೆ ನಾಗೂಬಾಯಿ. ನೀವು ಯೋಚನೆ ಮಾಡಬೇಡಿ. ಸ್ಕೂಲ್ ಕಮಿಟಿಯಲ್ಲಿ ನಮ್ಮ ಯಜಮಾನರ ಮಾತು ಮೀರುವವರು ಯಾರೂ ಇಲ್ಲ. ಅವರ ತಲೆಗೆ ಒಂದು ವಿಷಯ ಬಂದರೆ ಸಾಕು—ಸಾಧಿಸಿದಲ್ಲದೆ ಅವರು ಸುಮ್ಮನಿರುವುದಿಲ್ಲ.”

“ಏನೋಮ್ಮ—ನಿಮ್ಮ ರತ್ನ ಬೇರೆ ಅಲ್ಲ—ಸೀತಾ ಬೇರೆ ಅಲ್ಲ. ನೀವು ಅಲ್ಲೇ ಇರ್‍ತೀರಿ. ಅವಳನ್ನೂ ನೋಡಿಕೊಳ್ಳಿ.”

“ನೀವೂ ನಿಮ್ಮ ಯಜಮಾನರು ಯಾವಾಗಲಾದರೂ ನಮ್ಮೂರಿಗೆ ಬನ್ನಿ—ಬೆಳಿಗ್ಗೆ ಬಂದು ಸಾಯಂಕಾಲ ಹೊರಡಬೇಕು ಎನ್ನಬೇಡಿ. ನಾಲ್ಕು ದಿನ ಇರುವ ಹಾಗೆ ಬನ್ನಿ.”

“ಆಗಲಮ್ಮ—ಬರುತ್ತೇವೆ.”

“ನನ್ನ ಮಗಳನ್ನು ಒಳ್ಳೆಯ ಕಡೆ ಸೇರಿಸಿ ಪುಣ್ಯ ಕಟ್ಟಿಕೊಂಡಿರಿ. ನಿಮ್ಮ ಉಪಕಾರದ ಋಣ ಹೇಗೆ ತೀರಿಸಬೇಕೋ ಕಾಣೆ.”

“ನಮ್ಮ ಸೀತನ್ನ ನೀವು ನೋಡಿಕೊಂಡರೆ ಸಾಕ್ರೀ—ನನಗೆ ಇನ್ನೇನೂ ಬೇಕಿಲ್ಲ” ಎಂದರು.

ಎರಡು ದಿನಗಳ ತರುವಾಯ ಸೀತಾರಾಮಯ್ಯನವರು ಪರಿವಾರದೊಂದಿಗೆ ಆನೇಕಲ್ಲಿಗೆ ಪ್ರಯಾಣ ಬೆಳಸಿದರು.

## ೨೧

ಒಂದು ದಿನ ಬೆಳಿಗ್ಗೆ ಬೇಗ ಎದ್ದ ರಾಮಸ್ವಾಮಿ, ಸ್ನಾನ ಮುಗಿಸಿ, ತಾಯಿಯ ಬಳಿಗೆ ಬಂದು, ಅವರಿಗೆ ನಮಸ್ಕರಿಸಿ,

"ಆಶೀರ್ವಾದ ಮಾಡಮ್ಮ" ಎಂದ.

"ಯಾಕಪ್ಪಾ ?"

"ಇವತ್ತು ನನ್ನ ರಿಸಲ್ಟ್ ಬರತ್ತೆ."

"ಬಾಯಿತುಂಬ ಹರಸುತ್ತೇನೆ ನನ್ನಪ್ಪ — ಪ್ಯಾಸ್ ಆಗುತ್ತದೆ — ಹೋಗಿ ಬಾ" ಎಂದರು.

ತಾಯಿಯ ಹೃದಯದಿಂದ ಒಂದೇ ಪ್ರಾರ್ಥನೆ ಹೊರಹೊಮ್ಮಿತು.

'ಭಗವಂತಾ—ನನ್ನ ಮಗ ನಿರಾಶನಾಗದಿರಲಿ.'

ಒಂದು ಗಂಟೆಯ ತರುವಾಯ ಹಿಂದಿರುಗಿದ ರಾಮಸ್ವಾಮಿ,

"ಪಾಸ್ ಆಯಿತಮ್ಮ" ಎಂದ.

"ನಾಗೂಬಾಯಿಯವರಿಗೂ, ಪದ್ಮನಾಭರಾಯರಿಗೂ ತಿಳಿಸಿಬಾರಪ್ಪ," ಎಂದರು.

ರಾಮು ತೇರ್ಗಡೆಯಾದುದು ಯೋಗಾನರಸಿಂಹಯ್ಯನವರ ಮನಸ್ಸಿನಿಂದ ದೊಡ್ಡ ಭಾರ ಇಳುಹಿದಂತಾಗಿತ್ತು. ಅವನ ಕಾಲೇಜ್ ಖರ್ಚಿಗೆ ನಿವೇದಿತ ವಾಗಿದ್ದ ಹಣ ಮನೆಯ ಖರ್ಚಿಗೆ ಒದಗಿತು.

ರಾಮುಗೆ ಒಂದು ನಿಮಿಷವೂ ಬಿಡುವಿಲ್ಲ.

ಪತ್ರಿಕೆಗಳಲ್ಲಿ ಬರುತ್ತಿದ್ದ ಜಾಹಿರಾತುಗಳನ್ನು ನೋಡಿ ಅವನು ಕೆಲಸಕ್ಕೆ ಅರ್ಜಿ ಹಾಕುತ್ತಿದ್ದ. ಕೆಲವಕ್ಕೆ ಮಾರುತ್ತರಗಳೂ ಬಂದಿದ್ದವು.

ಈ ಬಗ್ಗೆ ಒಂದು ನಿರ್ಧಾರಕ್ಕೆ ಬರಲು ಅವನಿಗೆ ಸಾಧ್ಯವಾಗಲಿಲ್ಲ. ಅರ್ಜಿಗಳ ಪ್ರತಿಗಳನ್ನೂ, ಅವುಗಳಿಗೆ ಬಂದಿದ್ದ ಮಾರುತ್ತರಗಳನ್ನೂ ತೆಗೆದು ಕೊಂಡು ಪದ್ಮನಾಭರಾಯರನ್ನು ಕಾಣಲು ಹೋದ.

ನಾಗೂಬಾಯಿ ಅವನನ್ನು ಸ್ವಾಗತಿಸಿ,

" ಕೂತ್ಕೋ ರಾಮು–ಬರುತ್ತಾರೆ–ಸ್ನಾನ ಮಾಡುತ್ತಿದ್ದಾರೆ " ಎಂದರು.

ಸ್ನಾನ ಮುಗಿಸಿಕೊಂಡು ಬಂದ ರಾಯರು,

" ಏನು ರಾಮಣ್ಣ—ಇಷ್ಟು ಬೇಗ ಬಂದುಬಿಟ್ಟೆ " ಎಂದು ಕೇಳಿದರು.

" ಒಂದು ವಿಷಯ ನಿರ್ಧರಿಸುವುದಕ್ಕೆ ನಿಮ್ಮ ಸಲಹೆ ಬೇಕಾಗಿತ್ತು ಸ್ವಾಮಿ—ಬಂದೆ."

" ಹೇಳಪ್ಪಾ."

" ಕೆಲಸಕ್ಕೆ ನಾನು ಪ್ರಯತ್ನಿಸುತ್ತಿರುವುದು ತಮಗೆ ಗೊತ್ತಿದೆಯಲ್ಲ."

" ಗೊತ್ತಿದೆ."

" ನನ್ನ ಅರ್ಜಿಗಳಿಗೆ ಕೆಲವು ಉತ್ತರಗಳು ಬಂದಿವೆ."

" ಎಲ್ಲಿಂದ ? "

" ಒಂದು ಟಾಟಾ ಕಂಪೆನಿ, ಜಮ್‌ಷೆಡ್‌ಪುರ್ — ಅಸಿಸ್ಟೆಂಟ್ ಇಂಜ ನಿಯರ್ — ತಿಂಗಳಿಗೆ ರೂ. ೪೫೦ ಸಂಬಳ ; ಎರಡು — ಬಂಗಲಕ್ಷ್ಮಿ ಇಂಜನಿಯರಿಂಗ್ ಕಂಪೆನಿ — ಅಸಿಸ್ಟೆಂಟ್ ಇಂಜನಿಯರ್ — ಸಂಬಳ ರೂ. ೪೫೦ + ರೂ. ೧೦೦ ; ಮೂರು—ಜೋಗ್—ಜೂನಿಯರ್ ಇಂಜನಿಯರ್—ಸಂಬಳ ರೂ. ೧೫೦ + ರೂ. ೩೦ ಇವುಗಳಲ್ಲಿ. ಯಾವದನ್ನು ಒಪ್ಪಿಕೊಳ್ಳ ಬೇಕೆಂಬುದೇ ಸಮಸ್ಯೆಯಾಗಿದೆ."

ರಾಯರು ಹರ್ಷಗೊಂಡು,

" ನಾಗೂ, ಇಲ್ಲಿ ಬಾ " ಎಂದರು.

ನಾಗೂಬಾಯಿ ಬರಲು,

" ರಾಮೂಗೆ ಮೂರು ಕೆಲಸ ಬಂದಿದೆ ಕಣೆ—ಒಂದು ರೂ. ೫೫೦ ಸಂಬಳ ; ಇನ್ನೊಂದು ರೂ. ೪೫೦ ಸಂಬಳ ; ಇನ್ನೊಂದು ರೂ. ೧೮೦ ಸಂಬಳ—ಯಾವದನ್ನು ಒಪ್ಪಿಕೊಳ್ಳಲಿ ಎಂದು ಕೇಳುತ್ತಿದ್ದಾನೆ."

" ಕೇಳುವುದೇನಿದೆ ? ರೂ. ೫೫೦ ರದ್ದೇ ಒಪ್ಪಿಕೊಳ್ಳಲಿ."

" ಅವನು ಕಲ್ಕತ್ತೆಗೆ ಹೋಗಬೇಕಾಗುತ್ತದೆ."

" ರೂ. ೪೫೦ ರದ್ದು ? "

" ಜಮ್‌ಷೆಡ್‌ಪುರಕ್ಕೆ ಹೋಗಬೇಕಾಗುತ್ತದೆ. ರೂ. ೧೮೦ ರ ಕೆಲಸ ಒಪ್ಪಿಕೊಂಡರೆ ಮೈಸೂರಿನಲ್ಲೇ ಇರುತ್ತಾನೆ—ಜೋಗ್‌ನಲ್ಲಿ ! "

ನಾಗೂಬಾಯಿ ಅಭಿಮಾನಪೂರ್ವಕವಾಗಿ ರಾಮುಸ್ವಾಮಿಯನ್ನು ನೋಡುತ್ತಾ,

" ನಿನ್ನೆಮೊನ್ನೆ ಚಡ್ಡಿ ಹಾಕಿಕೊಂಡು ನಮ್ಮ ಮುಂದೆ ಓಡಾಡುತ್ತಿದ್ದ ರಾಮು ಇವತ್ತು ೫೫೦ ರೂಪಾಯಿ ಸಂಬಳ ತರುವ ಗಂಡಸಾಗಿದ್ದಾನೆಂದು ನಂಬುವುದೇ ಸಾಧ್ಯವಿಲ್ಲವಾಗಿದೆಯೆಂದ್ರೆ ?—ಕಾಲ ಎಷ್ಟುಬೇಗ ಓಡುತ್ತಿದೆ ? ನಮಗೂ ವಯಸ್ಸಾಗುತ್ತಿದೆಯೋ ಅಂತೀನಿ."

" ಕೇಳಿದೆಯಾ ರಾಮು—ಇವಳು ಹದಿನೆಂಟು ವರ್ಷದ ಹಡ್ಡೆ ಹುಡುಗಿ ಎಂದು ತಿಳಿದುಕೊಂಡಿದ್ದಾಳೆ."

" ನಿಮಗೂ ಚಿಕ್ಕಮ್ಮನಿಗೂ ವಯಸ್ಸಾಗಿದೆ ಎಂದು ನನಗೂ ಅನಿಸುತ್ತಿಲ್ಲ ರಾಯರೇ."

ರಾಯರು ನಗುತ್ತಾ,

" ಚೆನ್ನಾಗಿ ಹೇಳಿದೆ ಬಿಡು—ನೀನೂ ಸರಿಯೇ ! "

" ರಾಮು—ಏನು ಮಾಡಬೇಕು—ಹೇಳಿ."

" ನನಗೆ ಹೊಳೆಯಲಿಲ್ಲ ಕಣೇ—ಅದಕ್ಕೇ ನಿನ್ನ ಕರೆದೆ."

" ರಾಮು—ನೀನು ಐದು ನೂರು, ಆರು ನೂರು ಸಂಪಾದಿಸುವುದು ನಮಗೆಲ್ಲಾ ದೊಡ್ಡ ಹೆಮ್ಮೆ. ಕಮಲಾಕ್ಷಮ್ಮನವರು, ನಿಮ್ಮ ತಂದೆಯವರು ಪಟ್ಟ ಶ್ರಮ ಸಾರ್ಥಕವಾಯಿತು. ಆದರೆ..................."

" ಹೇಳಿ ಚಿಕ್ಕಮ್ಮ."

" ' ನಾನು ಮುಂದಕ್ಕೆ ಹೋಗಬೇಕೆಂದಿದ್ದರೆ, ಇವಳು ಹಿಂದಕ್ಕೆ ಜಗ್ಗು ತ್ತಾಳೆ ' ಎಂದುಕೊಳ್ಳಬೇಡ."

" ಇಲ್ಲಮ್ಮ—ಹೇಳಿ."

" ನಾಲ್ಕು ಕಾಸು ಕಡಿಮೆ ಬಂದರೂ ಚಿಂತೆಯಿಲ್ಲ—ನೀನು ತಾಯಿ ತಂದೆಗಳಿಂದ ದೂರ ಹೋಗಬೇಡಪ್ಪಾ. ನಿನ್ನ ಅಪ್ಪ ಅಮ್ಮ ಎಂದಿಗೂ

ಹಣಕ್ಕಾಗಿ ಬಾಳಿದವರಲ್ಲ—ಹೃದಯಕ್ಕಾಗಿ ಬಾಳಿದವರು—ಸುಬ್ಬನೂ ದೂರ ಹೋದ—ಸೀತೂನೂ ಗಂಡನ ಮನೆಗೆ ಹೊರಟುಹೋಗುತ್ತಾಳೆ—ನೀನೂ ದೂರ ಹೋಗಿಬಿಟ್ಟರೆ......................"

"ಹೆಚ್ಚು ಹಣ ಇವತ್ತು ನಮ್ಮ ಮನೆಗೆ ಅಗತ್ಯವಾಗಿದೆ ಚಿಕ್ಕಮ್ಮ."

"ನಿಜ. ಅದಕ್ಕಿಂತ ಹೆಚ್ಚಾಗಿ ನಿಮ್ಮ ಮನೆಗೆ ಪ್ರೇಮ, ಅಂತಃಕರಣ ಬೇಕಾಗಿದೆ."

ರಾಮು ಉತ್ತರಿಸಲಿಲ್ಲ.

ದೀರ್ಘಾಲೋಚನಾಮಗ್ನನಾಗಿ ಕುಳಿತುಬಿಟ್ಟ.

ನಾಗೂಬಾಯಿಯ ಸ್ಪಷ್ಟೋಕ್ತಿ ಅವನ ಕಣ್ಣುಗಳನ್ನು ತೆರೆಯಿಸಿದ್ದವು.

ಈ ಸಮಸ್ಯೆಯನ್ನು ರಾಮುವೇ ಬಿಡಿಸಿ ಒಂದು ನಿರ್ಧಾರಕ್ಕೆ ಬರಲೆಂದು ಯೋಚಿಸಿದ ನಾಗೂಬಾಯಿ,

"ನಿಮ್ಮ ಮಾವನವರು ಶ್ರೀನಿವಾಸಮೂರ್ತಿ ವಿಷಯ ಏನು ಮಾಡಿದರೋ ಗೊತ್ತಾಗಲಿಲ್ಲವಲ್ಲ ರಾಮು."

"ಅಪ್ಪನಿಗೆ ಕಾಗದ ಬರೆದಿದ್ದಾರಮ್ಮ — ಈ ವಾರದಲ್ಲಿ ಶ್ರೀನಿವಾಸ ಮೂರ್ತಿಗೆ ಆರ್ಡರ್ ಕಳಿಸುತ್ತಾರಂತೆ !"

"ಆತ ದೊಡ್ಡಮನುಷ್ಯರು—ಮಾತಿಗೆ ತಪ್ಪುವವರಲ್ಲ—ರತ್ನನನ್ನು ಯಾವಾಗ ಕರೆಸುತ್ತೀ ?"

"ನನ್ನ ಕೆಲಸದ ಆರ್ಡರ್ ಬಂದು ಬಿಡಲಿ ಚಿಕ್ಕಮ್ಮ—ಕರೆಸೋಣ" ಎಂದ.

## ೨೨

ತನ್ನ ಜೀವನದ ಮುಂದಿನ ಪಥ ನಿಶ್ಚಯಿಸುವುದು ಹೇಗೆಂದು ರಾಮಸ್ವಾಮಿ ಆಳವಾಗಿ ವಿಚಾರಮಾಡತೊಡಗಿದ.

ಜೋಗಿಗೆ ಹೋದರೆ ಸಿಕ್ಕುವುದು ರೂ. ೧೮೦; ಕಲ್ಕತ್ತೆಗೆ ಹೋದರೆ ಸಿಕ್ಕುವುದು ರೂ. ೫೫೦—ಮುನ್ನೂರು ಎಪ್ಪತ್ತು ರೂಪಾಯಿಗಳ ಅಂತರ!

' ನಿಮ್ಮ ಮನೆಗೆ ಪ್ರೇಮ—ಅಂತಃಕರಣ ಬೇಕಾಗಿದೆ.

' ಸುಬ್ಬೂನೂ ದೂರ ಹೋದ—ಸೀತೂನೂ ಗಂಡನ ಮನೆಗೆ ಹೊರಟು ಹೋಗುತ್ತಾಳೆ—ನೀನೂ ದೂರ ಹೋಗಿಬಿಟ್ಟರೆ..................

' ನಿನ್ನ ಅಪ್ಪ ಅಮ್ಮಾ ಎಂದಿಗೂ ಹಣಕ್ಕಾಗಿ ಬಾಳಿದವರಲ್ಲ—ಹೃದಯಕ್ಕಾಗಿ ಬಾಳಿದವರು!'

ನಾಗೂಬಾಯಿಯವರ ಈ ನುಡಿಗಳು ರಾಮಸ್ವಾಮಿಯನ್ನು ಹೊಡೆದೆಬ್ಬಿಸಿದ್ದವು.

' ನಾಗೂಬಾಯಿಯವರು ಹೇಳಿದ್ದು ನಿಜ.

' ಹಣ ಎಂದಾದರೂ ಸಂಪಾದಿಸಬಹುದು.

' ತಾಯಿತಂದೆಯನ್ನು ಸಂಪಾದಿಸಲು ಶಕ್ಯವೇ?'

ಎಂದು ಯೋಚಿಸಿ ಜೋಗಕ್ಕೆ ಹೋಗುವುದೇ ಸರಿ ಎಂದು ನಿರ್ಧರಿಸಿದ.

ಮಗನ ನಿರ್ಧಾರ ಕೇಳಿದ ಕಮಲಾಕ್ಷಮ್ಮನವರು,

" ಅದು ಶುದ್ಧ ಕಾಡಲ್ಲವೇ ರಾಮು?" ಎಂದರು.

" ಕಾಡಾಗಿತ್ತಮ್ಮ— ಈಗ ಊರಾಗಿದೆ. ಸಾವಿರಾರು ಮಂದಿ ಅಲ್ಲಿ ವಾಸಮಾಡುತ್ತಿದ್ದಾರೆ."

" ನಿನಗೆ ಮನೆ!"

" ಕ್ವಾರ್ಟರ್ಸ್ ಕೊಡುತ್ತಾರೆ."

" ಊಟ."

" ಉಡುಪಿ ಮಾವ ಇದ್ದಾನಲ್ಲಾ ? "

" ಹೋಟಲು ಊಟ ಬೇಡಪ್ಪಾ—ರತ್ನನನ್ನು ಜತೆಯಲ್ಲಿ ಕರೆದುಕೊಂಡು ಹೋಗು."

" ಈಗಲೇ ಬೇಡಮ್ಮ. ನಾನು ಅಲ್ಲಿ ಹೋಗಿ ಡ್ಯೂಟಿ ಸೇರಿ, ಎರಡು ಮೂರು ತಿಂಗಳಾದನಂತರ ಅವಳನ್ನು ಕರೆಸಿಕೊಳ್ಳುತ್ತೇನೆ."

" ಅಲ್ಲಿಯವರೆಗೆ ಅವಳು ಆನೆಕಲ್ಲಿನಲ್ಲೇ ಇರಬೇಕೇ ? "

" ಇಲ್ಲ—ಇಲ್ಲಿ ಬಂದಿರಲಿ."

" ನಿಮ್ಮ ಮಾವನವರಿಗೆ ಕಾಗದ ಬರೆಸಿ ಹಾಕುತ್ತೇನೆ."

" ಹಾಕಿಸು " ಎಂದ.

ಯೋಗಾನರಸಿಂಹಯ್ಯನವರ ಕಾಗದ ಕೈಸೇರಿದ ಕೂಡಲೆ ಸೀತಾ ರಾಮಯ್ಯನವರು ಜೋಯಿಸರನ್ನು ಬರಮಾಡಿಕೊಂಡು ಒಂದು ಮುಹೂರ್ತ ನಿಶ್ಚಯಿಸಿ, ಕೂಡಲೇ ಮಾರುತ್ತರ ಬರೆದರು.

ಕಮಲಾಕ್ಷಮ್ಮನವರೇ ಸುಬ್ಬುಕೃಷ್ಣನಿಗೆ ಕಾಗದ ಬರೆದು, ಮಗನನ್ನೂ ಸೊಸೆಯನ್ನೂ ಆನೆಕಲ್ಲಿಗೆ ಆಹ್ವಾನಿಸಿದರು.

> ' ಈಗ ನನಗೆ ಪೋಸ್ಟಿಂಗ್ (Posting) ಆಗುವದಿದೆ.
> ಆರ್ಡರ್ಸ್ (Orders) ಕಾಯುತ್ತಿದ್ದೇನೆ. ಆನೇಕಲ್ಲಿಗೆ
> ಬರಲು ಸಾಧ್ಯವಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ '

ಎಂದು ಉತ್ತರ ಬರೆದ.

ಶ್ರೀನಿವಾಸಮೂರ್ತಿಗೆ ಆರ್ಡರ್ಸ್ ಹೋಗಿತ್ತು. ಅವನು ಸಾಮಾನು ಗಳನ್ನು ಕಟ್ಟಿಕೊಂಡು, ತಾಯಿಯೊಂದಿಗೆ ಬಂದಿಳಿದ.

ನಿಶ್ಚಿತ ಮುಹೂರ್ತಕ್ಕೆ ಎರಡು ದಿವಸಗಳ ಮುಂಚೆ ಎಲ್ಲರೂ ಆನೇಕಲ್ ಸೇರಿದರು.

ಸೀತಾರಾಮಯ್ಯನವರು, ಶ್ರೀನಿವಾಸಮೂರ್ತಿಗೆ ಗೊತ್ತುಮಾಡಿದ್ದ ಮನೆ ಯಲ್ಲಿಯೇ ಎಲ್ಲರೂ ಇಳಿದುಕೊಂಡರು.

ತಮ್ಮ ಸೊಸೆಯನ್ನು ಜತೆಯಲ್ಲಿಯೇ ಇಟ್ಟುಕೊಳ್ಳಲು ಅಚ್ಚಮ್ಮನವರು ಅಪೇಕ್ಷಿಸಲು, ಸೀತೂ ಪ್ರಸ್ತವನ್ನೂ ಕೂಡಲೆ ನೆರವೇರಿಸುವುದು ಅನಿವಾರ್ಯವಾಯಿತು.

ಎರಡು ಶಾಸ್ತ್ರಗಳು ಮುಗಿದ ಮೂರು ದಿನಗಳು ಯೋಗಾನರಸಿಂಹಯ್ಯ, ಅವರ ಪರಿವಾರ ಆನೇಕಲ್ಲಿನಲ್ಲೇ ನಿಲ್ಲಬೇಕಾಯಿತು.

ಸೀತಾರಾಮಯ್ಯನವರು ಬೀಗರಿಗೂ ಅವರ ಪರಿವಾರಕ್ಕೂ ರಾಜೋಪಚಾರ ಮಾಡಿದರು.

ನಾಲ್ಕನೆಯ ದಿನ ಹೆಂಡತಿ, ಮಗ, ಸೊಸೆ, ಪದ್ಮನಾಭರಾಯರು, ನಾಗೂಬಾಯಿಯವರೊಂದಿಗೆ ಬೆಂಗಳೂರಿಗೆ ಹಿಂದಿರುಗಿದರು.

ಸೀತಮ್ಮನ ಸ್ಥಾನದಲ್ಲಿ ರತ್ನಾ ನಿಲ್ಲಬೇಕಾಯಿತು.

ಒಂದು ವಾರ ಕಳೆಯಿತು.

ಎಂಟನೆಯ ದಿನ ಕಮಲಾಕ್ಷಮ್ಮ ಮಗನನ್ನು ಕರೆದು,

" ರಾಮೂ, ನೀನು ಜೋಗಕ್ಕೆ ಯಾವಾಗ ಹೊರಡಬೇಕು "

ಎಂದು ಕೇಳಿದರು.

" ಮುಂದಿನ ವಾರ ಹೋಗಬೇಕಮ್ಮ."

" ರತ್ನಾ ಇಲ್ಲಿಗೆ ಬಂದು ಒಂದು ವಾರವಾಯಿತು. ಅವಳನ್ನು ನೀನು ಎಲ್ಲಿಗೂ ಕರೆದುಕೊಂಡು ಹೋಗಿಲ್ಲ."

" ............................................................ "

" ಹಾಗೆ ಮಾಡಬಾರದಪ್ಪಾ. ಅದೂ ಚಿಕ್ಕಪುಟ್ಟ ಹುಡುಗಿ—ತಾಯಿ ತಂದೆ ಬಿಟ್ಟು ನಮ್ಮನ್ನು ನಂಬಿಕೊಂಡು ಇಲ್ಲಿಗೆ ಬಂದಿದೆ. ಅದರ ಮನಸ್ಸಿನಲ್ಲಿ ಆಸೆಗಳಿರುವುದಿಲ್ಲವೇ ? ಸಂಜೆಗೆ ಸಿನೀಮಾಕ್ಕೆ ಕರೆದುಕೊಂಡು ಹೋಗು."

" ನೀನೂ ಬಾ."

" ನಾನು ಯಾಕೋ—ಶಿವಪೂಜೆಯಲ್ಲಿ ಕರಡಿಬಿಟ್ಟಹಾಗೆ ! " ಎಂದರು.

ತಾಯಿಯ ಆಜ್ಞಾನುಸಾರ ರತ್ನನನ್ನು ಜತೆಯಲ್ಲಿ ಕರೆದುಕೊಂಡು ಹೊರಟ ರಾಮುಸ್ವಾಮಿ,

" ಸಿನೀಮಾಕ್ಕೆ ಹೋಗೋಣವೋ—ಲಾಲ್‌ಬಾಗಿಗೆ ಹೋಗೋಣವೋ ರತ್ನಾ " ಎಂದು ಕೇಳಿದ.

" ಲಾಲ್‌ಬಾಗಿಗೆ ಹೋಗೋಣ."

ಇಬ್ಬರೂ ಲಾಲ್‌ಬಾಗಿಗೆ ಬಂದು ' ಲತಾಮಂಟಪ 'ದಲ್ಲಿ ಕಲ್ಲು ಬೆಂಚಿನ ಮೇಲೆ ಕುಳಿತರು.

" ಅಮ್ಮ ನನ್ನ ಬಯ್ದಳು ರತ್ನಾ."

" ಏಕೆ ? "

" ನಿನ್ನನ್ನು ಹೊರಗೆ ಕರೆದುಕೊಂಡು ಹೋಗಲಿಲ್ಲವೆಂದು."

ರತ್ನಾ ನಕ್ಕು,

" ಅತ್ತೆಮ್ಮನವರು ಹೇಳಿದರು ಎಂದು ನನ್ನನ್ನು ಕರೆದುಕೊಂಡು ಬಂದಿರಿ ! "

" ನನ್ನ ಮನಸ್ಸಿನಲ್ಲೂ ಇತ್ತು—ಆದರೆ ಸಂಕೋಚವಾಯಿತು."

" ಸಂಕೋಚ—ನಾಚಿಕೆ ಎಲ್ಲಾ ಹೆಂಗಸರಿಗೆ ಮಾತ್ರ ಇರತ್ತೆ ಎಂದಿದ್ದೆ."

" ಹೆಂಗಸರ ಹೊಟ್ಟೆಯಲ್ಲಿ ಹುಟ್ಟುವ ಗಂಡಸರಿಗೂ ಇರತ್ತೆ ಕಣೇ."

ಅವನ ನಗೆಮಾತಿನ ಪೂರ್ಣಾರ್ಥ ಗ್ರಹಿಸಿ ರತ್ನಾ ನಕ್ಕಳು.

" ರತ್ನಾ—ನೀನು ನನ್ನ ಮನೆಯವಳಾದೆ. ನಮ್ಮ ಮನೆಯ ವಿಷಯವೆಲ್ಲಾ ನಿನಗೆ ಗೊತ್ತಿರುವುದು ಒಳ್ಳೆಯದು "

ಎಂದು ಸವಿಸ್ತಾರವಾಗಿ ಎಲ್ಲವನ್ನೂ ನಿರೂಪಿಸಿ,

" ನಾನು ಮುಂದಿನ ವಾರ ಜೋಗಿಗೆ ಹೋಗಬೇಕಾಗಿದೆ ರತ್ನಾ."

" ನಾನು......................."

" ಇಲ್ಲೇ ಇರಬೇಕು."

" ನೀವು ಜೋಗಿನಿಂದ ಯಾವಾಗ ಬರುತ್ತೀರಿ ? "

" ಕೆಲಸಕ್ಕೆ ಸೇರಿದ ಕೂಡಲೇ ರಜಾ ಸಿಕ್ಕುವುದಿಲ್ಲ. ಒಂದೆರಡು ತಿಂಗಳಾದನಂತರ ರಜಾ ತೆಗೆದುಕೊಂಡು ಬರುತ್ತೇನೆ."

ರತ್ನಾ ಮ್ಲಾನವದನಳಾಗಲು,

" ನೀನು ಯೋಚಿಸಬಾರದು—ಜೋಗಿನಲ್ಲಿ ನಾನು ಖಾಯಮ್ಮಾಗಿ ಇರುವುದಾದರೆ ನಿನ್ನನ್ನು, ಅಮ್ಮನನ್ನು, ಅಣ್ಣನನ್ನು ಕರೆಸಿಕೊಳ್ಳುತ್ತೇನೆ."

" ಹಾಗೇ ಮಾಡಿ."

" ಅಮ್ಮನನ್ನು ನೀನು ಚೆನ್ನಾಗಿ ನೋಡಿಕೊಳ್ಳಬೇಕು."

" ಅವರು ದೊಡ್ಡವರು..............."

" ವಯಸ್ಸಿನಲ್ಲಿ ದೊಡ್ಡವಳು. ಅವಳ ಸ್ವಭಾವ ಹಸುಮಗುವಿನಂಥದು."

" ಕಾಗದ ಬರೆಯುತ್ತಿರುತ್ತೀರಾ ? "

" ಬರೆಯುತ್ತೇನೆ."

" ನನಗೂ ಬರೆಯಿರಿ."

" ಆಗಲಿ."

" ನಮ್ಮ ಮನೆಗೂ ನಿಮ್ಮ ಮನೆಗೂ ಬಾಂಧವ್ಯ ಏರ್ಪಡಿಸಿವದರು ನಾಗೂಬಾಯಿ—ಪದ್ಮನಾಭರಾಯರು."

" ಹೌದಂತೆ—ಅಮ್ಮ ಅವರ ವಿಷಯ ಬಹಳ ಹೇಳಿದ್ದಾಳೆ."

" ಅವರ ಯೋಗಕ್ಷೇಮವೂ ನಿನಗೆ ಸೇರಿದ್ದು."

" ಆಗಲಿ."

" ನಿಮ್ಮನ್ನೆಲ್ಲಾ ಬಿಟ್ಟುಹೋಗಲು ನನಗೆ ಮನಸ್ಸಿಲ್ಲ ರತ್ನಾ—ಆದರೆ ಹೋಗಬೇಕಾಗಿದೆ."

" ಇಲ್ಲೇ ಕೆಲಸ ಸಿಕ್ಕುವುದಿಲ್ಲವೇ ? "

" ಸಿಕ್ಕುತ್ತದೆ. ಸ್ವಲ್ಪ ದಿನ ಜೋಗಿನಲ್ಲಿ ಇದ್ದರೆ ಒಳ್ಳೆಯದು—ನನಗೆ ಟ್ರೇನಿಂಗ್ ಆಗುತ್ತದೆ."

" ನಮ್ಮನ್ನು ಬೇಗ ಕರೆಸಿಕೊಳ್ಳಿ."

" ಆಗಲಿ."

" ಬಹಳ ಯೋಚಿಸಬೇಡಿ—"

" ........................................................ "

" ನಿಮ್ಮ ಮನಸ್ಸಿನಲ್ಲಿ ಏನಿದೆಯೆಂಬುದನ್ನು ನಾನು ಬಲ್ಲೆ. ನನ್ನ ಅತ್ತೆ ದೇವತಾಸ್ತ್ರೀ—ಅವರ ಕೈಯಲ್ಲಿ ನಾನು ಸೈ ಎನ್ನಿಸಿಕೊಳ್ಳುತ್ತೇನೆ."

" ಅಷ್ಟೇ ನನಗೆ ಬೇಕಾಗಿರುವುದು ರತ್ನಾ "

ಎಂದು ಮೇಲಕ್ಕೆದ್ದ.

ಇಬ್ಬರೂ ಮೌನತಳೆದೇ ಮನೆ ಸೇರಿದರು.

## ೨೩

ವಾರಾದ್ಯಂತ ಕಮಲಾಕ್ಷಮ್ಮನವರಿಗೆ ಸ್ವಲ್ಪವೂ ಬಿಡುವಿಲ್ಲವಾಯಿತು. ಮಗನ ಪ್ರಯಾಣಕ್ಕೆ ಅಣಿಮಾಡಲಾರಂಭಿಸಿದ್ದರು.

ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಹುಳಿಪುಡಿ, ಮೆಣಸಿನ ಪುಡಿ, ಚಟ್ಟಣಿ ಪುಡಿ, ಮೆಂತ್ಯದ ಹಿಟ್ಟು, ಭಾತಿನ ಪುಡಿ ಸಿದ್ಧವಾದವು. ಚಕ್ಕುಲಿ, ಮುತ್ಸೋರೆ, ಕೋಡಬಳೆ, ರವೆವುಂಡೆ, ಪುಳ್ಳಂಗಾಯಿ ಉಂಡೆ, ಹುರಿಗಾಳು, ಹುರುಕಲು, ಕಾಯಿ ಹುರಿಟ್ಟು, ಕುಟ್ಟವಲಕ್ಕಿ, ಅರಳು ಹುರಿಟ್ಟು ಮಾಡಿಟ್ಟರು.

ಅತ್ತೆಗೆ ವಿಶ್ರಾಂತಿಕೊಡಲು, ರತ್ನಳೇ ರಾತ್ರಿಯ ಅಡಿಗೆ ವಹಿಸಿಕೊಂಡಿದ್ದಳು.

ತಾಯಿಯ ಕಳಕಳಿ, ಅವರು ಪಡುತ್ತಿದ್ದ ಶ್ರಮ ಕಂಡ ರಾಮಸ್ವಾಮಿ,

" ಇದೇನಮ್ಮಾ — ರಾಮಾಯಣ ಹಚ್ಚಿಕೊಂಡೆ. ಇವುಗಳನ್ನೆಲ್ಲಾ ತೆಗೆದುಕೊಂಡು ಹೋಗಿ ನಾನೇನು ಮಾಡಲಿ—"

" ಹೋಟಲ್ ಊಟ ತಿಂದರೆ ನಿನ್ನ ಮೈ ಏನಾಗಬೇಕು ರಾಮು—ಅಲ್ಲಿ ಅಡಿಗೆಯವನು ಸಿಕ್ಕಿದರೆ ಇಟ್ಟುಕೋ."

" ನನ್ನ ಪಾಡು ನಾನು ನೋಡಿಕೊಳ್ಳುತ್ತೇನಮ್ಮ—ಸುಮ್ಮನೆ ನೀನು ಒದ್ದುಗೊಳ್ಳಬೇಡ " ಎಂದ.

ಅವನು ಪ್ರಯಾಣ ಬೆಳಸುವ ಹಿಂದಿನ ದಿನ ರಾತ್ರಿ ಅಡಿಗೆ ಮಾಟಕ್ಕೆ ರತ್ನಾ, ಅತ್ತೆಯ ಬಳಿಗೆ ಬಂದು,

" ಅತ್ತೆ........" ಎಂದಳು.

" ಏನಮ್ಮಾ ? "

" ಇವತ್ತು ನೀವು, ಮಾವನವರು, ನಿಮ್ಮ ಮಕ್ಕಳ ಜತೆ ಊಟಕ್ಕೆ ಕುಳಿತುಕೊಳ್ಳಬೇಕು."

" ಚೆನ್ನಾಗಿ ಹೇಳಿದೆ ಕಣೇ ರತ್ನಾ—ಅರಿಯದ ಹುಡುಗಿ ನೀನು ಹಸಿದು ಕೊಂಡಿರುವಾಗ ದಾಣಾಧಡಿ ನಾನು ಕುಳಿತುಕೊಂಡು ಗಡುಗಲೇ ? "

" ಹಾಗಲ್ಲ ಅತ್ತೆ—ಅವರು ನಾಳೆ ಹೊರಟುಬಿಡುತ್ತಾರೆ. ಒಪ್ಪತ್ತು ನೀವು ಅವರ ಜತೆ ಊಟ ಮಾಡಿದರೆ ಅವರಿಗೆ ತುಂಬ ಸಂತೋಷವಾಗತ್ತೆ."

" ಅಯ್ಯೋ ನನ್ನಪ್ಪಾ—ಎಂಥ ಕರುಳೇ ನಿನ್ನದು ! "

ಮಾರನೆಯ ರಾತ್ರಿ ರಾಮಸ್ವಾಮಿ ಪ್ರಯಾಣಸನ್ನಧನಾದ.

ಅವನನ್ನು ಬೀಳ್ಕೊಡಲು ಪದ್ಮನಾಭರಾಯರು, ನಾಗೂಬಾಯಿ ಬಂದಿದ್ದರು.

ಜಟಕಾದವನು ಒಳಗೆ ಬಂದು ರಾಮಸ್ವಾಮಿಯ ಸಾಮಾನುಗಳನ್ನೆಲ್ಲಾ ಎತ್ತಿಕೊಂಡು ಹೋಗಿ ಗಾಡಿಯಲ್ಲಿಟ್ಟ.

ರಾಮಸ್ವಾಮಿ, ತಂದೆ, ತಾಯಿ, ನಾಗೂಬಾಯಿ, ಪದ್ಮನಾಭರಾಯರಿಗೆ ನಮಸ್ಕರಿಸಿ, ರತ್ನನನ್ನೊಮ್ಮೆ ನೋಡಿ,

" ಬರ್ತೀನಿ ರತ್ನಾ " ಎಂದ.

ರತ್ನಾ ತಲೆಯಲ್ಲಾಡಿಸಿದಳು.

ಅವನು ಗಾಡಿಯಲ್ಲಿ ಕುಳಿತುಕೊಳ್ಳಲು, ಗಾಡಿ ಮುಂದೆ ಅಡಿಯಿಟ್ಟಿತು.

ಭಾವನಾಪರವಶರಾಗಿದ್ದ ನಾಗೂಬಾಯಿ,

" ನಾನೂ ಬರ್ತೀನಿ ಕಮಲಾಕ್ಷಮ್ಮ " ಎಂದರು.

" ಹೋಗಿಬನ್ನಿ—ನಾಗೂಬಾಯಿ "

ಎಂದು ಒಳಕ್ಕೆ ಬಂದರು.

ರತ್ನಾ ಕಾಣಲಿಲ್ಲ.

' ರತ್ನಾ.................... '

ಮಾರುತ್ತರ ಬರಲಿಲ್ಲ.

' ರತ್ನಾ—ಎಲ್ಲಿದ್ದೀಯಮ್ಮ '

ಎಂದವಳನ್ನು ಅರಸುತ್ತಾ ರೂಮಿಗೆ ಬಂದರು.

ರತ್ನಾ ಹಾಸಿಗೆಯ ಮೇಲೆ ಕುಳಿತು ಕಂಬನಿಗರೆಯುತ್ತಿದ್ದಳು.

ರತ್ನಳ ಪಕ್ಕದಲ್ಲಿ ಕುಳಿತ ಕಮಲಾಕ್ಷಮ್ಮ, ಅವಳ ತಲೆಯನ್ನೆತ್ತಿಕೊಂಡು ತಮ್ಮ ಎದೆಯಮೇಲಿಟ್ಟುಕೊಂಡರು.

ರತ್ನಾ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ಕಮಲಾಕ್ಷಮ್ಮನವರ ಕಣ್ಣುಗಳಿಂದಲೂ ಧಾರೆಯಿಳಿಯಿತು.

ರತ್ನಳ ತಲೆ ನೇವರಿಸುತ್ತಾ,

" ಅಳಬೇಡಪ್ಪಾ—ನಿನ್ನ ಎಳೇ ಕರುಳಿಗೆ ಎಷ್ಟು ಸಂಕಟವಾಗಿದೆಯೆನ್ನುವುದನ್ನು ಬಲ್ಲೆ. ರಾಮು ಕಾಗದ ಬಂದಕೂಡಲೆ ನಿನ್ನನ್ನು ಕಳಿಸಿಕೊಡುತ್ತೇನೆ."

" ನೀವೂ ಬರಬೇಕು ಅತ್ತೆ."

" ಬರ್ತೀನಿ. ನಾನೇ ಕರೆದುಕೊಂಡು ಹೋಗಿ, ನಿನ್ನನ್ನು ಗಂಡನ ಮನೆಯಲ್ಲಿ ಬಿಟ್ಟು, ನೀನು ಸಂಸಾರಮಾಡುವುದನ್ನು ಕಣ್ತುಂಬ ನೋಡಿ, ಹಿಂದಿರುಗುತ್ತೇನೆ."

" ಇಲ್ಲ ಅತ್ತೆ—ನೀವು ನಮ್ಮ ಜತೆಯಲ್ಲಿಯೇ ಇರಬೇಕು."

" ಎಲ್ಲಾದರೂ ಉಂಟೇ ರತ್ನಾ—ನಿನ್ನ ಸ್ವಾಮಿ ಹತ್ತಿರ ನೀನಿರಬೇಕು. ನನ್ನ ಸ್ವಾಮಿ ಹತ್ತಿರ ನಾನಿರಬೇಕು. ಅದೇ ಚೆನ್ನು—ಅದೇ ನ್ಯಾಯ" ಎಂದರು.

# ೨೪

ಒಂದು ದಿನ ಬೆಳಿಗ್ಗೆ ಯೋಗಾನರಸಿಂಹಯ್ಯನವರು 'ಹಿಂದೂ' ಪತ್ರಿಕೆಯ ಅಧ್ಯಯನ ಮಾಡುತ್ತ ಕುಳಿತಿದ್ದರು.

ಅಂಚೆಯಾಳು ಒಂದು ಕಾಗದ ತಂದಿತ್ತು ಹೋದ.

ಕಾಗದವನ್ನೊಡೆದು ಓದಿಕೊಂಡ ಯೋಗಾನರಸಿಂಹಯ್ಯನವರು,

"ಕಮಲೂ........"

ಎಂದು ಕರೆದರು.

ಒಳಗಿನಿಂದ ಕಮಲಾಕ್ಷಮ್ಮ ಬಂದು,

"ಏನು ?" ಎಂದರು.

"ನಿನ್ನ ಮಗ ಕಾಗದ ಬರೆದಿದ್ದಾನೆ."

"ರಾಮೂನೇ ?"

"ಅಲ್ಲ—ಸುಬ್ಬೂ."

"ಏನು ಬರೆದಿದ್ದಾನೆ."

ಕಾಗದವನ್ನು ಬಿಚ್ಚಿ ಹಿಡಿದುಕೊಂಡು,

"ಮಿ|| ಸುಬ್ಬುಕೃಷ್ಣಯ್ಯ, ಎಂ.ಎ., ಎಂ.ಸಿ.ಎಸ್.,
ಅಸಿಸ್ಟೆಂಟ್ ಕಮಿಷನರ್
ಚಿಕ್ಕಮಗಳೂರು.

ತಂದೆಯವರ ಸ|| ಕ್ಕೆ. ನಮಸ್ಕಾರಗಳು,

ನನ್ನನ್ನು ಚಿಕ್ಕಮಗಳೂರಿಗೆ ಪೋಸ್ಟ್ ಮಾಡಿದ್ದಾರೆ. ಇಲ್ಲಿಗೆ ನಾನು ಬಂದು ಹತ್ತು ದಿನಗಳಾದವು.—ಚಿ|| ಸೌ|| ಶಾರದೆಯೂ ಇಲ್ಲಿಗೆ ಬಂದಿದ್ದಾಳೆ. ನೀವೆಲ್ಲರೂ ಆರೋಗ್ಯವಾಗಿದ್ದೀರೆಂದು ನಂಬಿದ್ದೇನೆ.

ಸುಬ್ಬುಕೃಷ್ಣ."

" ಸ್ವಪ್ರತಿಷ್ಠೆ ತೋರಿಸಿಕೊಳ್ಳುವುದಕ್ಕೆ ಈ ಕಾಗದ ಬರೆದಿದ್ದಾನೆ ಕಣೇ. ಅವನಾಯಿತು—ಅವನ ಹೆಂಡತಿಯಾಯಿತು. ನಾವು ಯಾರೂ ಅವನಿಗೆ ಬೇಕಿಲ್ಲ."

" ಹಾಗೇಕನ್ನುವಿರಿ. ತಾಯಿ, ತಂದೆ, ತಂಗಿ, ತಮ್ಮ ಎನ್ನುವ ವಾಂಛಲ್ಯ ಇಲ್ಲದೆ ಇರುತ್ತದೆಯೇ ? "

" ಅವನ ವಾಂಛಲ್ಯಪ್ರದರ್ಶನ ನೋಡಿಯಾಯಿತಲ್ಲಾ !

" ಸುಬ್ಬೂ ನಮ್ಮ ಹುಡುಗ. ಅವನು ತಪ್ಪುಮಾಡಲಿ, ನೆಪ್ಪುಮಾಡಲಿ ನಾವು ಹೊಟ್ಟೆಗೆ ಹಾಕಿಕೊಳ್ಳಬೇಕು."

" ನೀನು ಏನಾದರೂ ಮಾಡಿಕೊಳ್ಳಬಹುದು. ಅವನ ಸುದ್ದಿ ಸಮಾಚಾರ ನನಗೆ ಬೇಕಿಲ್ಲ "

ಎಂದು ಖಂಡಿತವಾಗಿ ನುಡಿದುಬಿಟ್ಟರು.

ಸದ್ಯಕ್ಕೆ ' ತಾಟಸ್ಥ್ಯ ಧೋರಣೆ ' ತಳಿಯುವುದೇ ಲೇಸೆಂದು ಭಾವಿಸಿದ ಕಮಲಾಕ್ಷಮ್ಮ ಮಾತು ಬೆಳಸಲಿಲ್ಲ.

ಎರಡು ದಿನ, ಮೂರು ದಿನಕ್ಕೊಮ್ಮೆ ರಾಮು ಕ್ರಮವಾಗಿ ಪತ್ರ ಬರೆದು ತನ್ನ ಯೋಗಕ್ಷೇಮ ತಿಳಿಸುತ್ತಿದ್ದ.

> ' ನೀನು ಮಾಡಿಕೊಟ್ಟ ತಿಂಡಿಯನ್ನು ನನ್ನ ಸ್ನೇಹಿತರು ಒಂದೇ ದಿವಸದಲ್ಲಿ ಮುಗಿಸಿದರು—ಕ್ಯಾಂಟೀನ್‌ನಲ್ಲಿ ಊಟ ಮಾಡುತ್ತಿದ್ದೇನೆ. ಮೊನ್ನೆ ಭಾನುವಾರ ನಾನೂ ನನ್ನ ಸ್ನೇಹಿತರೂ ಸೇರಿಕೊಂಡು ಅಡಿಗೆ ಮಾಡಿದೆವು. ಅದರ ವೈಖರಿಯನ್ನು ಎದುರಿಗೇ ವರ್ಣಿಸಬೇಕು—ಕಾಗದದಲ್ಲಿ ಬರೆಯಲು ಸಾಧ್ಯವಿಲ್ಲ. ಸುಬ್ಬಣ್ಣ ಚಿಕ್ಕಮಗಳೂರಿಗೆ ಪೋಸ್ಟ್ ಆಗಿರುವ ವಿಷಯ ಪತ್ರಿಕೆಗಳಲ್ಲಿ ಓದಿದೆ. ಸೀತೂ ಯಿಂದ ನನಗೆ ಕಾಗದವೇ ಬಂದಿಲ್ಲ. ನಿಮಗೆ ಬರೆದಿದ್ದಾ ಳೆಯೇ ?
>
> ಮಾ॥ ಶ್ರೀ॥ ನಾಗೂಬಾಯಿಯವರೂ ಪೂಜ್ಯ ಪದ್ಮ ನಾಭರಾಯರೂ ಆರೋಗ್ಯವಾಗಿದ್ದಾರೆಯೇ ?

ಇನ್ನು ಒಂದು ತಿಂಗಳು ನನಗೆ ವಿಪರೀತ ಕೆಲಸ.
ಆಮೇಲೆ ಆಫೀಸಿಗೆ ಹಾಕುತ್ತಾರೆ—ಪರವಾಯಿಲ್ಲ.

ನಾನು ಜೋಗ್ ಬಿಡುವುದರೊಳಗಾಗಿ ನೀವೆಲ್ಲರೂ
ಒಮ್ಮೆ ಇಲ್ಲಿಗೆ ಬರಬೇಕು.'

ಅಂದೇ ರತ್ನನಿಗೂ ಕಾಗದ ಬಂದಿತ್ತು.

ತಿಂಗಳು ಕಳೆದು ಹೊಸ ತಿಂಗಳು ಹುಟ್ಟಿಕೊಂಡಿತ್ತು.

ಮೂರನೆಯ ತಾರೀಖಿನ ದಿನ, ಕಮಲಾಕ್ಷಮ್ಮನವರ ಹೆಸರಿಗೆ ಒಂದು ರಿಜಿಸ್ಟರ್ಡ್ ಕಾಗದ ಬಂದಿತು.

ಅದನ್ನವರು ಓದಿ ಮುಗಿಸುವುದರಲ್ಲಿ ಅವರ ಕಣ್ಣೀರಿನಿಂದ ಕಾಗದ ತೊಯ್ದು ಹೋಗಿತ್ತು.

ಹೆಂಡತಿ ತಂದುಕೊಟ್ಟ ಕಾಗದವನ್ನು ಯೋಗಾನರಸಿಂಹಯ್ಯ ಓದ ಲಾರಂಭಿಸಿದರು :

" ಮಾ|| ಶ್ರೀಯುವರ ಚರಣಸನ್ನಿಧಿಗೆ ಬಾಲಕನ ಸಾಷ್ಟಾಂಗ ನಮಸ್ಕಾರಗಳು.

ಒಂದನೆಯ ತಾರೀಖಿನ ದಿನ ನನ್ನ ಮೊದಲನೆಯ ತಿಂಗಳ ಸಂಬಳ ರೂ. ೧೮೦ ತೆಗೆದುಕೊಂಡೆ. ಅದರಲ್ಲಿ ರೂ. ೮೦ ನನ್ನ ಖರ್ಚಿಗಿಟ್ಟುಕೊಂಡು ರೂ. ೧೦೦ ಕಳಿಸುತ್ತಿದ್ದೇನೆ. ಈ ಹಣ ಅಣ್ಣನಿಗೆ ಕಳಿಸಲು ಧೈರ್ಯ ವಾಗಲಿಲ್ಲ. ನಿನಗೆ ಕಳಿಸುವಾಗಲೂ ನನ್ನ ಕೈ ನಡಗು ತ್ತಿತ್ತು. ನನ್ನ ಮನೆಗೆ ಇಷ್ಟಾದರೂ ಸೇವೆ ಸಲ್ಲಿಸಲು ಸಾಧ್ಯವಾದುದಕ್ಕೆ ನಾನು ಸಂತೋಷಿಸುತ್ತೇನೆ. ಹಣ ಕಳಿಸಿದೆನೆಂದು ಬೇಸರಪಟ್ಟುಕೊಳ್ಳಬೇಡಿ. ನಿನ್ನ, ಅಣ್ಣನ ಪ್ರೇಮದ ಋಣವನ್ನು ನಾನು ಎಷ್ಟು ಜನ್ಮ ಹೊತ್ತರೂ ತೀರಿಸಲಾರೆ. ಬೇಸರವಾಗಿಲ್ಲ ಎಂದು ಕೂಡಲೆ ನೀನು ಒಂದು ಪಂಕ್ತಿ ಬರೆದರೆ ನನ್ನ ಮನಸ್ಸಿಗೆ ನೆಮ್ಮದಿ ಯಾಗುತ್ತದೆ."

ಯೋಗಾನರಸಿಂಹಯ್ಯನವರ ಕಣ್ಣುಗಳೂ ತೇವಗೊಂಡಿದ್ದವು.

ಎದುರಿಗೆ ನಿಂತಿದ್ದ ಹೆಂಡತಿಗೆ ತಮ್ಮ ದೌರ್ಬಲ್ಯವನ್ನು ಕಾಣಿಸಬಾರದೆಂದು ಕಣ್ಣೀರನ್ನು ಅಡಗಿಸಿಕೊಂಡು, ಕಾಗದವನ್ನು ಹಿಂದಿರುಗಿಸುತ್ತಾ,

" ಕಮಲೂ......................." ಎಂದರು.

" ಏನು ? "

" ಮದುವೆಯಲ್ಲಿ ನಾವು ರತ್ನನಿಗೆ ಸರಿಯಾಗಿ ಒಡವೆ ವಸ್ತ್ರ ಇಡಲಿಲ್ಲ. ಈ ಹಣದಲ್ಲಿ ಅವಳಿಗೆ ಏನು ಬೇಕೋ ತೆಗೆದುಕೊಡು " ಎಂದರು.

## ೨೫

ಅಚ್ಚಮ್ಮನವರು ಸ್ವಭಾವತಃ ಕೆಟ್ಟವರಲ್ಲದಿದ್ದರೂ ಆಶೆಬುರುಕಿ.

ಚಿಕ್ಕ ವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡಿದ್ದ ಅಚ್ಚಮ್ಮ ಸ್ವಸಾಹಸ, ದುಡಿಮೆಗಳಿಂದ ತಮ್ಮ ಏಕಮಾತ್ರ ಪುತ್ರನನ್ನು ಓದಿಸಿ ಮುಂದಕ್ಕೆ ತಂದಿದ್ದರು.

ಶ್ರೀನಿವಾಸಮೂರ್ತಿಯ ಭವಿಷ್ಯತ್ತಿನ ಬಗ್ಗೆ ಕನಸಿನ ಗೋಪುರ ಕಟ್ಟುತ್ತಿದ್ದ ಅಚ್ಚಮ್ಮ ಅವನ ವಿವಾಹ ಮೊದಲನೆಯ ಹಂತವೆಂದು ಭಾವಿಸಿದ್ದರು.

'ಮೂರ್ತಿಗೆ ಅನುಕೂಲಸ್ಥರ ಮನೆಯ ಹೆಣ್ಣು ತರಬೇಕು. ಮಾವನಿಂದ ಮೂರ್ತಿಗೆ ಯಥೇಚ್ಛ ಹಣ ಪ್ರಾಪ್ತಿಯಾಗಬೇಕು'

ಎಂದು ಬಯಸಿದ್ದರು.

ಮೂರ್ತಿ ಸೀತೆಯನ್ನು ಒಪ್ಪಿಕೊಂಡು, ಅವರ ಆಶಾಗೋಪುರ ಮುರಿದು ಬೀಳುವಂತೆ ಮಾಡಿದ್ದ.

ಸೀತೆಯೆಂದರೆ ಸಹಜವಾಗಿ ಅಚ್ಚಮ್ಮನವರ ಮನಸ್ಸಿನಲ್ಲಿ ಕಿನಿಸು—ಕಿಡಿ ತುಂಬಿತ್ತು.

ಸೀತೆ ಕೆಲಸಕಾರ್ಯಬಾರದ ಮೂಳಿಯಾಗಿ, ಸೋಮಾರಿಯಾಗಿದ್ದರೆ, ಅಚ್ಚಮ್ಮನವರ ಮನಸ್ಸಿಗೆ ಸಮಾಧಾನವಾಗುತ್ತಿತ್ತು. ಅವಳು ಕುಳಿತಾಗ, ನಿಂತಾಗ ತಪ್ಪು ಹುಡುಕಿ ಆಕ್ಷೇಪಿಸಬಹುದಾಗಿತ್ತು—ಬಯ್ದು ಬಾಯಿಚಪಲ ತೀರಿಸಿಕೊಳ್ಳಬಹುದಾಗಿತ್ತು.

ಆದರೆ ಸೀತೆಯ ಕೆಲಸಕಾರ್ಯದ ಅಚ್ಚುಕಟ್ಟುತನ ಅಚ್ಚಮ್ಮನವರನ್ನೇ ಬೆರಗುಗೊಳಿಸಿತ್ತು.

ಸೊಸೆಯನ್ನು ಹುರಿದು ಮುಕ್ಕಲು ನಿಶ್ಚಯಿಸುವ ಅತ್ತೆಗೆ ಕಾರಣಗಳಿಗೇನೂ ಅಭಾವವಿರುವುದಿಲ್ಲ.

ಸೀತೆಯ ಬಗ್ಗೆ ಅಕೃತ್ರಿಮಪ್ರೇಮ ತಳೆದಿದ್ದ ರಾಜಮ್ಮ, ಅವಳನ್ನು ಆಗಾಗ್ಗೆ ಮನೆಗೆ ಕರೆದೊಯ್ದು ಉಪಚರಿಸುತ್ತಿದ್ದರು. ಹಬ್ಬ ಹರಿದಿನ ಬಂದರೆ ಸೀತೆಯನ್ನೂ ಶ್ರೀನಿವಾಸಮೂರ್ತಿಯನ್ನೂ ಊಟಕ್ಕೆ ಕರೆಯುತ್ತಿದ್ದರು.

ಒಂದೊಂದು ಸಂಜೆ ಸೀತೆ, ರಾಜಮ್ಮನವರ ಮನೆಗೆ ಹೋಗಿ ಸ್ವಲ್ಪ ಹೊತ್ತು ಕುಳಿತಿದ್ದು ಬರುತ್ತಿದ್ದಳು.

ಸೀತೆಯ ಮೇಲೆ ರೇಗಲು ಕಾರಣ ಹುಡುಕುತ್ತಿದ್ದ ಅಚ್ಚಮ್ಮನವರಿಗೆ ಇದಿಷ್ಟೇ ಸಾಕಾಯಿತು.

ಒಂದು ದಿನ ಅವಳು ರಾಜಮ್ಮನವರ ಮನೆಯಿಂದ ಹಿಂದಿರುಗಲು, ಅಚ್ಚಮ್ಮನವರು,

" ದಿನಾ ನಿನಗೆ ರಾಜಮ್ಮನವರ ಮನೆಯಲ್ಲಿ ಏನು ಕೆಲಸ ಸೀತಾ " ಎಂದು ಕೇಳಿದರು.

" ದಿನಾ ನಾನು ಎಲ್ಲಿ ಹೋಗುತ್ತೇನೆ ಅತ್ತೆ."

" ಬಾಯಿ ಮುಚ್ಚು—ಎದುರು ವಾದಿಸಬೇಡ."

" ............................................... "

" ಇನ್ನು ಮೇಲೆ ನೀನು ಅವರ ಮನೆಗೆ ತುಕ್ಕಬೇಕಾದದ್ದಿಲ್ಲ. ಸಾಕು—ಒಳಗೆ ಹೋಗು "

ಎಂದು ಗದರಿಕೊಂಡರು.

ಅತ್ತೆ ಇದ್ದಕ್ಕಿದ್ದಂತೆ ಏಕೆ ಸಿಟ್ಟಾದರೆಂಬುದು ಸೀತನಿಗೆ ಗೊತ್ತಾಗಲಿಲ್ಲ.

ಮೂರು ದಿನಗಳು ಕಳೆದರೂ ಸೀತಾ ಮನೆಗೆ ಬಾರದಿರಲು, ರಾಜಮ್ಮನವರೇ ಅವಳನ್ನು ಹುಡುಕಿಕೊಂಡು ಬಂದರು.

ಸೀತಾ ಕಾಣದಿರಲು ರಾಜಮ್ಮನವರು,

" ಸೀತೂ ಎಲ್ಲಿ ಅಚ್ಚಮ್ಮನವರೇ "

ಎಂದು ಕೇಳಿದರು.

" ಇಲ್ಲೇ ಇದ್ದಳು. ಹಿತ್ತಲಲ್ಲಿ ಬಟ್ಟೆ ಒಗೆಯುತ್ತಿರಬಹುದು "

ಎಂದು ಅವಳನ್ನು ಕರೆದರು.

ಸೀತಾ ಬರಲು ರಾಜಮ್ಮನವರು,

" ಇವತ್ತು ಶುಕ್ರವಾರ. ಸೀತೆಯನ್ನು ಕರೆದುಕೊಂಡು ಹೋಗುತ್ತೇನ್ರೀ—"

" ಕರ್ಕೊಂಡು ಹೋಗಿಯಮ್ಮ—ಯಾರು ಬೇಡವೆಂದವರು ? "

ಎಂದು ಅಚ್ಚಮ್ಮ ಉತ್ತರಿಸಿದರು.

ತಮ್ಮ ಮನೆ ತಲುಪಿದ ಕೂಡಲೆ,

" ಮೂರು ದಿನಗಳಿಂದ ನಮ್ಮ ಮನೆಗೆ ಏಕೆ ಬರಲಿಲ್ಲ ಸೀತಾ "

ಎಂದು ರಾಜಮ್ಮ ಕೇಳಿದರು.

" ಆಗಲಿಲ್ರೀ—ಕೈತುಂಬ ಕೆಲಸವಿತ್ತು "

ಎಂದು ಸೀತಾ ನಿಜಸ್ಥಿತಿಯನ್ನು ಮರೆಮಾಜಿದಳು.

ದಿನಗಳೆದಂತೆ ಸೀತಾ ತಮ್ಮ ಮನೆಗೆ ಬರುವುದು ವಿರಳವಾಗಲು, 'ಅತ್ತೆಯ ಆಡಳಿತ' ಆರಂಭವಾಗಿದೆಯೆಂದು ರಾಜಮ್ಮ ಊಹಿಸಿದರು.

ಅವರು ಎಷ್ಟು ಒತ್ತಾಯಪಡಿಸಿದರೂ ಸೀತಾ ಬಾಯಿಬಿಡುತ್ತಿರಲಿಲ್ಲ.

ಸೀತಾ ದಿನದಿನಕ್ಕೆ ಕೃಶಳಾಗುತ್ತಿದ್ದುದನ್ನು ಕಂಡ ರಾಜಮ್ಮನವರು,

" ನಿಜಸ್ಥಿತಿ ನೀನು ನನಗೆ ತಿಳಿಸದಿದ್ದರೆ, ನಾನು ಕಾಗದ ಬರೆದು ನಿಮ್ಮ ತಾಯಿಯವರನ್ನು ಕರೆಸುತ್ತೇನೆ ಸೀತಾ " ಎಂದರು.

ಸೀತಾ ಹೆದರಿ,

" ನಿಮ್ಮ ದಮ್ಮಯ್ಯ—ಹಾಗೆ ಮಾಡಬೇಡ್ರೀ. ಅಮ್ಮನಿಗಿರುವ ಕಷ್ಟ ವ್ಯಸನವೇ ಸಾಕಾಗಿದೆ. ನನ್ನದೂ ಸೇರಿಸುವುದು ಬೇಡ."

" ನಿನ್ನಂಥ ಸೊಸೆಯನ್ನು ಬಾಳಿಸುವುದಕ್ಕೆ ನಿಮ್ಮತ್ತೆಗೇನು ಗುನುಗು ? "

" ........................................................... "

" ನೀನು ಬಾಯಿಬಿಟ್ಟು ಹೇಳಬೇಕು ಸೀತಾ. ನಿಮ್ಮಮ್ಮ ನಿನ್ನ ಜವಾಬ್ದಾರಿ ನನಗೆ ಹೊರೆಸಿದ್ದಾರೆ."

" ಮನೆಯೆಂದ ಕಡೆ ಮಾತು ಬರುತ್ತದೆ—ಹೋಗುತ್ತದೆ. ಅವುಗಳನ್ನೆಲ್ಲಾ ಏಕೆ ದೊಡ್ಡದು ಮಾಡಿಕೊಳ್ಳಬೇಕು ರಾಜಮ್ಮನವರೇ."

" ದೊಡ್ಡದು ಮಾಡಿಕೊಳ್ಳಬೇಕೆಂದಲ್ಲ. ಇರುವ ಸ್ಥಿತಿ ತಿಳಿದರೆ ಓರೆ ಕೋರೆಗಳನ್ನು ಸರಿಪಡಿಸಕೊಳ್ಳಬಹುದು. ಹೇಳು ಸೀತಾ—ನನ್ನನ್ನೂ ನೀನು ನಂಬುವುದಿಲ್ಲವೇ ? "

" ಏಕೆ ಹಾಗನ್ನುವಿರಿ ರಾಜಮ್ಮನವರೇ—ನೀವೂ ನಿಮ್ಮ ಯಜಮಾನರೂ ನಮಗೆ ಮಾಡಿರುವ ಉಪಕಾರ ಮರೆಯಲು ಸಾಧ್ಯವೇ ? "

" ನೀನು ಹೇಳುವುದು ನಮ್ಮಿಬ್ಬರಲ್ಲೇ ಇರುತ್ತದೆ ಸೀತಾ."

" ಇನ್ನೇನಿಲ್ರೀ — ಇಷ್ಟೇ — ನಾನು ಬಡವರ ಮನೆಯ ಹುಡುಗಿ. ನಮ್ಮತ್ತೆಮ್ಮನವರಿಗೆ ಐಶ್ವರ್ಯವಂತರ ಮನೆಯ ಹುಡುಗಿ ಬೇಕಾಗಿತ್ತು."

" ಅಯ್ಯೋ ಐಶ್ವರ್ಯವೇ — ಈ ಹಾಳು ಐಶ್ವರ್ಯವನ್ನು ಯಾರು ಹೋಗುವಾಗ ಜತೆಯಲ್ಲಿ ತೆಗೆದುಕೊಂಡು ಹೋಗುತ್ತಾರೆ."

" ಅತ್ತೆಮ್ಮನವರ ಹತ್ತಿರ ನೀವು ಈ ವಿಷಯ ಪ್ರಸ್ತಾಪಮಾಡಬೇಡ್ರಿ."

" ಇಲ್ಲಮ್ಮ—ಇಲ್ಲ."

" ರತ್ನನನ್ನು ಯಾವಾಗ ಕರೆಸುತ್ತೀರಿ."

" ಈಗೇಕೆ ಕರೆಸಲಿ ? "

" ಕರೆಸಿ—ನಾನೂ ಅವಳೂ ನಾಲ್ಕು ದಿನ ಜತೆಯಲ್ಲಿದ್ದ ಹಾಗಾಗುತ್ತದೆ. ಅಣ್ಣಯ್ಯ ಅವಳನ್ನು ಜೋಗಿಗೆ ಕರೆಸಿಕೊಳ್ಳುವುದಕ್ಕೆ ಮುಂಚೆ ನನ್ನ ಜತೆ ನಾಲ್ಕು ದಿನ ಇರಲಿ. ನೀವೂ ಹೂ ಎಂದರೆ ನಾನೇ ಅಮ್ಮನಿಗೆ ಬರೆಯುತ್ತೇನೆ."

" ನಿಮ್ಮಮ್ಮ ಒಬ್ಬರೇ ಆಗುತ್ತಾರಲ್ಲಾ ಸೀತಾ."

" ಪರವಾಗಿಲ್ಲ. ನಾಗೂಬಾಯಿ ಅವಳ ಜತೆಗಿರುತ್ತಾರೆ."

" ಆಗಲಮ್ಮ—ನಿಮ್ಮ ತಾಯಿಯವರಿಗೆ ಬರೆಯುತ್ತೇನೆ "

ಎಂದು ಹೇಳಿದರು.

## ೨೬

ಯಜಮಾನರನ್ನು ಯಾವದೋ ಚಿಂತೆ ಬಾಧಿಸುತ್ತಿದೆ ಎಂಬುದು ಕಮಲಾಕ್ಷಮ್ಮನವರಿಗೆ ಮನವರಿಕೆಯಾಯಿತು.

ಯೋಗಾನರಸಿಂಹಯ್ಯನವರ ಬಾಯಿ ಬಿಡಸಲೆತ್ನಿಸಿ ವಿಫಲರಾಗಿದ್ದರು.

ಒಂದು ದಿನ ಅವರು ಪಟ್ಟು ಹಿಡಿದು ಕುಳಿತು,

" ಏತಕ್ಕೆ ಸುಮ್ಮನೆ ಯೋಚಿಸುತ್ತಿರುವಿರಿ. ನಿಮ್ಮ ಮನಸ್ಸಿನಲ್ಲಿ ಏನು ಚಿಂತೆ ಇದೆ ನನಗೆ ಹೇಳಬಾರದೇ ? "

" ಏನೂ ಇಲ್ಲ ಕಮಲಾ, ನೀನು ಆತಂಕಪಟ್ಟುಕೊಳ್ಳಬೇಡ. ಮನುಷ್ಯ ನಾಗಿ ಹುಟ್ಟಿದ ಮೇಲೆ ಚಿಂತೆಗಳು ತಪ್ಪುತ್ತವೆಯೇ ? "

" ಹೋಗಲಿ ಬಿಡಿ—ನಾನು ಇದ್ದು ಸಾರ್ಥಕವಾಯಿತು."

" ಚಿಂತೆ ಇನ್ನೇನೂ ಇಲ್ಲ ಕಮಲೂ–ಮಕ್ಕಳಿಗೆ ಒಂದು ದಾರಿಯಾಯಿತು. ಅವರ ಅದೃಷ್ಟವಿದ್ದಂತೆ ಅವರು ಬದುಕಿಕೊಳ್ಳುತ್ತಾರೆ.—ಸೀತೂ ಮದುವೆಗೆ ನಾನು ಪದ್ಮನಾಭನಿಂದ ಐದು ಸಾವಿರ ತೆಗೆದುಕೊಂಡಿದ್ದೆ. ಅದರಲ್ಲಿ ಒಂದು ಬಿಡಿಗಾಸನ್ನೂ ನಾನು ಅವನಿಗೆ ಹಿಂದಿರುಗಿಸಿಲ್ಲ.—ಅದೇ ಚಿಂತೆ."

" ಅವರು ಕೇಳಿದರೇ ? "

" ಛೆ! ಛೆ! ಪಾಪ! ಅವನು ಕೇಳುವ ಮನುಷ್ಯನೇ ಅಲ್ಲ. ಅವನು ಕೇಳದಿದ್ದರೂ ಕೊಡಬೇಕಾದುದು ನಮ್ಮ ಧರ್ಮ—"

" ಹೌದು."

" ಯಾವದಾದರೂ ಆಸ್ತಿಯಿದ್ದಿದ್ದರೆ ಮಾರಿ ತೀರಿಸಬಹುದಾಗಿತ್ತು. ಸತ್ಯ, ಧರ್ಮಕ್ಕೆ ಗಂಟುಬಿದ್ದು ನಾನು ಆಸ್ತಿಯನ್ನೂ ಮಾಡಲಿಲ್ಲ."

" ಇವತ್ತು ನಮ್ಮನ್ನು ಕಾಪಾಡುತ್ತಿರುವುದು ಆಸ್ತಿಯಲ್ಲ–ಸತ್ಯ ಧರ್ಮ !"

"ನಿಜ ನಿಜ—ಆದರೆ....?"

"ನೀವು ಸಿಟ್ಟಾಗದಿದ್ದರೆ ಒಂದು ಮಾತು ಹೇಳುತ್ತೇನೆ."

"ಏನದು ?"

"ನನ್ನನ್ನು ಎರಡು ದಿನಗಳ ಮಟ್ಟಿಗೆ ಚಿಕ್ಕಮಗಳೂರಿಗೆ ಕಳಿಸಿಕೊಡಿ—"

"ಏನು ? ಸುಬ್ಬು ಮನೆ ಬಾಗಿಲಿಗೆ ನೀನು ಭಿಕ್ಷಕ್ಕೆ ಹೋಗುತ್ತೀಯಾ ?"

"ತಾಯಿ ಮಗನ ಮನೆಯ ಬಾಗಿಲಿಗೆ ಭಿಕ್ಷಕ್ಕೆ ಹೋಗಬೇಕೇ ?"

"ಅವನೆಂಥಾ ಮಗ—"

"ಅಯ್ಯೋ—ಹಾಗನ್ನಬೇಡಿ. ಸುಬ್ಬು ಕೆಟ್ಟವನಲ್ಲ. ಸ್ವಲ್ಪ ಅವನಿಗೆ ಮೊಬ್ಬು ಕವಿದಿದೆ. ಒಂದಲ್ಲ ಒಂದು ದಿನ ಹೋಗುತ್ತದೆ."

"ಅವನಿಂದ ನನಗೆ ಬಿಡಿಕಾಸಿನ ದಾಕ್ಷಿಣ್ಯ ಬೇಕಿಲ್ಲ !"

"ಹೋಗಲಿ ಬಿಡಿ."

ಸಮಸ್ಯೆ ಅಪರಿಹಾರ್ಯವಾಗಿಯೇ ಉಳಿಯಿತು.

"ಸೀತೂ ಕಾಗದ ಬರೆದಿದ್ದಾಳೆ."

"ಏನು ಬರೆದಿದ್ದಾಳೆ."

"ನಾಲ್ಕು ದಿನದ ಮಟ್ಟಿಗೆ ರತ್ನನನ್ನು ಕಳಿಸಿಕೊಡು ಎಂದು."

"ಕಳಿಸು—ರತ್ನಾ ಹೋಗಿ ಬರಲಿ."

"ಈ ಹುಡುಗಿ ಹೋಗಲ್ಲ ಅನ್ನುತ್ತಿದೆ—ಏನು ಮಾಡಲಿ ?"

"ಏಕಂತೆ ?"

"ನಾನು ಒಬ್ಬಳೇ ಇರುತ್ತೇನಲ್ಲ ಎಂದು ಅವಳಿಗೆ ಚಿಂತೆ."

ಯೋಗಾನರಸಿಂಹಯ್ಯನವರು ಕ್ಷಣಕಾಲ ಮೌನ ತಳೆದು,

"ಪದ್ಮನಾಭ, ನಾಗೂಬಾಯಿ ನಮ್ಮ ಮನೆಯ ಅಶ್ವಿನಿ ದೇವತೆಗಳು ಕಮಲೂ. ಅವರು ನಮಗೆ ಹತ್ತು ಬಗೆಯಲ್ಲಿ ಉಪಕಾರ ಮಾಡಿದ್ದಾರೆ. ಆದರೆ ಎಲ್ಲಕ್ಕಿಂತ ಹೆಚ್ಚೆಂದರೆ ರತ್ನನನ್ನು ನಮ್ಮ ಸೊಸೆ ಮಾಡಿದುದು. ಯಾರದೋ ಮನೆಯ ಹುಡುಗಿ—ಇದರ ವಾಂಛಲ್ಯ ನೋಡು."

"ನಿಜ. ರತ್ನನ ಗುಣ ಎಷ್ಟು ಕೊಂಡಾಡಿದರೂ ಸ್ವಲ್ಪವೇ. ಒಳ್ಳೆಯ ತಾಯಿ ಹೆತ್ತ ಮಗಳು."

"ರತ್ನನನ್ನು ಕಳಿಸಿಕೊಡು."

“ ನೀವು ಸೀತಾರಾಮಯ್ಯನವರಿಗೆ ಕಾಗದ ಬರೆಯಿರಿ. ಅವರೇ ಬಂದರೂ ಸರಿ—ಯಾರನ್ನಾದರೂ ಕಳಿಸಿದರೂ ಸರಿ.”

“ ಆಗಲಿ ” ಎಂದರು.

ಯೋಗಾನರಸಿಂಹಯ್ಯನವರ ಕಾಗದ ಬರಲು ಸೀತಾರಾಮಯ್ಯನವರು ತಮ್ಮ ಭಾವಮೈದುನ ವೆಂಕಟಸುಬ್ಬುವನ್ನು ಕಳಿಸಿಕೊಟ್ಟರು.

ಅವನ ಜತೆ ರತ್ನಾ ಆನೇಕಲ್ಲಿಗೆ ಪ್ರಯಾಣಮಾಡಿದಳು.

ಮೂರೇ ದಿನಗಳು ಆನೇಕಲ್ಲಿನಲ್ಲಿದ್ದ ರತ್ನಾ ನಾಲ್ಕನೆಯ ದಿನ ತಂದೆಯ ಜತೆ ಬೆಂಗಳೂರಿಗೆ ಹಿಂದಿರುಗಿದಳು.

ಅವಳನ್ನು ಕಂಡ ಕಮಲಾಕ್ಷಮ್ಮ,

“ ಇದೇನು ರತ್ನಾ—ಇಷ್ಟು ಬೇಗ ಬಂದುಬಿಟ್ಟೆ ” ಎಂದರು.

“ ಆನೇಕಲ್ ಬೇಸರವಾಯಿತು ಅತ್ತೆ—ಬಂದುಬಿಟ್ಟೆ.”

“ ಸುಳ್ಳು ಹೇಳುವುದು ಯಾವಾಗ ಕಲಿತೆ ರತ್ನಾ ? ”

ಅತ್ತೆಯ ಸಮೀಪಕ್ಕೆ ಬಂದುನಿಂತ ರತ್ನಾ,

“ ಅದೇಕೋ ಕಾಣೆ—ನಾನು ನಿಮ್ಮನ್ನು ಬಿಟ್ಟಿರಲಾರೆ ಅತ್ತೆ ” ಎಂದಳು.

ಸೊಸೆಯನ್ನಪ್ಪಿದ ಕಮಲಾಕ್ಷಮ್ಮ,

“ ರತ್ನಾ—ನಿಮ್ಮಮ್ಮ ನಿನಗೆ ಎಂಥ ಸೊಗಸಾದ ಹೆಸರಿಟ್ಟಿದ್ದಾರೆಯೇ ? ” ಎಂದರು.

# ೨೭

ಆರು ತಿಂಗಳು ಕಳೆಯಿತು.

ಒಂದು ದಿನ ಬೆಳಗ್ಗೆ ರಾಮುಸ್ವಾಮಿ ಜೋಗಿನಿಂದ ಬಂದಿಳಿದ.

ಮಗನನ್ನು ನೋಡಿ ಪರಮಾಶ್ಚರ್ಯಗೊಂಡ ಕಮಲಾಕ್ಷಮ್ಮನವರು,

" ಇದೇನೋ ರಾಮು ! " ಎಂದರು.

" ಭಾನುವಾರ ರಜಾ ಇತ್ತು. ಅದರ ಜತೆಗೆ ಮೂರು ದಿವಸ ರಜಾ ತೆಗೆದುಕೊಂಡು ಬಂದೆನಮ್ಮ."

" ಹೇಗಾಗಿಬಿಟ್ಟಿದ್ದೀಯಪ್ಪ—ಕೆಲಸ ಬಹಳ ಹೆಚ್ಚೇ ? "

" ಕೆಲಸವೂ ಹೆಚ್ಚು—ಬಿಸಿಲೂ ಜೋರು."

ತಾಯಿಯೊಂದಿಗೆ ಎಷ್ಟು ಮಾತನಾಡಿದರೂ ಮಗನಿಗೆ ತೃಪ್ತಿಯಿಲ್ಲ.

ತಾಯಿಯ ಸಡಗರ, ಸಂಭ್ರಮ ಹೇಳತೀರದಾಯಿತು.

ರಾಮುಸ್ವಾಮಿ ಒಬ್ಬನೇ ಸಿಕ್ಕುವುದನ್ನು ಕಾಯುತ್ತಿದ್ದ ರತ್ನಾ ಅವನು ಸ್ನಾನಗೃಹಕ್ಕೆ ಬರಲು,

" ಸಂಜೆಗೆ, ನನ್ನನ್ನು ಹೊರಗೆ ಕರೆದುಕೊಂಡು ಹೋಗಿ. ನಿಮ್ಮೊಂದಿಗೆ ನಾನು ಒಂದು ವಿಷಯ ಮಾತನಾಡಬೇಕಾಗಿದೆ " ಎಂದಳು.

ರಾತ್ರಿಯೆಲ್ಲಾ ನಿದ್ರೆಗೆಟ್ಟು ಪ್ರಯಾಣಮಾಡಿದ್ದ ರಾಮುಸ್ವಾಮಿ ಊಟ ಮುಗಿಸಿದ ಕೂಡಲೆ ಮಲಗಿಬಿಟ್ಟ.

ಅವನು ಏಳುವ ವೇಳೆಗೆ ನಾಲ್ಕು ಗಂಟೆಯಾಯಿತು.

ಅಡಿಗೆಯ ಮನೆಯಲ್ಲಿಯೇ ಕುಳಿತು ತಾಯಿ ಕೊಟ್ಟ ತಿಂಡಿ, ಕಾಫಿ ಮುಗಿಸುತ್ತಾ,

" ತಲೆ ಬಾಚಿಕೊಳ್ಳಮ್ಮ. ಯಾವದಾದರೂ ಸಿನೀಮಾಗೆ ಹೋಗಿ ಬರೋಣ " ಎಂದ.

“ ನನಗ್ಯಾಕೋ ಮಗೂ—ಸಿನೀಮಾ ! ”

“ ಇರಲಿ ಬಾಮ್ಮ.”

“ ನಾನು ಬೇಡ—ರತ್ನನನ್ನು ಕರೆದುಕೊಂಡು ಹೋಗು ” ಎಂದರು.

ಮನೆಬಿಟ್ಟು ಹೊರಟ ರಾಮಸ್ವಾಮಿ, ರತ್ನಾ ಲಾಲ್‌ಬಾಗಿಗೆ ಬಂದು ‘ ಲತಾಮಂಟಪ ’ದಲ್ಲಿ ಕುಳಿತರು.

ಕತ್ತೆತ್ತಿ ಗಂಡನನ್ನು ಕಣ್ತುಂಬ ನೋಡಿದ ರತ್ನನ ಕಣ್ಣುಗಳಲ್ಲಿ ಹನಿಗೂಡಿದವು.

“ ಏಕೆ ರತ್ನಾ...............”

“ ಮೂರು ತಿಂಗಳಿಗೆ ನೀವೆಷ್ಟು ಬಡವಾಗಿದ್ದೀರಿ. ಅತ್ತೆಮ್ಮನವರು ಹೇಳುತ್ತಿದ್ದುದು ನಿಜ—ಹೋಟಲ್ ಊಟ ನಿಮಗೆ ಮೈಗಾಗುವುದಿಲ್ಲ. ಈ ಬಾರಿ ನಾನೂ ನಿಮ್ಮ ಜತೆ ಬರುತ್ತೇನೆ.”

“ ಅಮ್ಮ ಒಬ್ಬಳೇ ಆಗುತ್ತಾಳಲ್ಲಾ.”

“ ಅವರೂ ಬರಲಿ.”

“ ಇಲ್ಲಿಗೇ ಟ್ರಾನ್ಸ್‌ಫರ್ ಮಾಡಿಸಿಕೊಳ್ಳಲು ನಾನು ಪ್ರಯತ್ನಿಸುತ್ತಿದ್ದೇನೆ ರತ್ನಾ. ಟ್ರಾನ್ಸ್‌ಫರ್ ಸಿಕ್ಕದಿದ್ದರೆ ನಿನ್ನನ್ನೂ ಅಮ್ಮನನ್ನೂ ಕರೆದುಕೊಂಡು ಹೋಗುತ್ತೇನೆ—ಯಾವದೋ ವಿಷಯ ಹೇಳಬೇಕೆಂದಿದ್ದೇನೆ ಎಂದೆ ! ”

“ ಹೌದು–ನಾನು ಆನೆಕಲ್ಲಿಗೆ ಹೋಗಿಬಂದ ವಿಷಯ ನಿಮಗೆ ಬರೆದಿದ್ದೆ.”

“ ಹೌದು—ಸೀತೂ ಹೇಗಿದ್ದಾಳೆ ? ”

“ ಅವಳ ವಿಷಯವೇ ನಾನು ಮಾತನಾಡಬೇಕೆಂದಿರುವುದು............”

“ ಶ್ರೀನಿವಾಸಮೂರ್ತಿ.......................”

“ ಅವರು ಸರಿಯಾಗಿಯೇ ಇದ್ದಾರೆ. ಅಚ್ಚಮ್ಮನವರು........”

“ ಕಾಡುತ್ತಿದ್ದಾರೆಯೋ ? ”

“ ಸೀತಾ ನಮ್ಮ ಮನೆಗೆ ಹೋಗುವುದಕ್ಕೂ ಅಚ್ಚಮ್ಮನವರು ವಿರೋಧಿಸುತ್ತಿದ್ದಾರೆ.”

“ ಏಕೆ—ಸೀತೂ ಏನು ಮಾಡಿದಳು.”

" ಅವಳು ಏನೂ ಮಾಡಿಲ್ಲ. ಸೀತೆಯನ್ನು ತಮ್ಮ ಮನೆಗೆ ತಂದು ಕೊಳ್ಳುವುದಕ್ಕೆ ಅಚ್ಚಮ್ಮನವರಿಗೆ ಇಷ್ಟವಿರಲಿಲ್ಲವಂತೆ! ಶ್ರೀಮಂತರ ಮನೆಯ ಹುಡುಗಿಯನ್ನು ತಂದುಕೊಳ್ಳಬೇಕೆಂದಿದ್ದರಂತೆ! "

" ಅಮ್ಮನಿಗೆ ಈ ವಿಷಯ ಗೊತ್ತೇ ? "

" ಇಲ್ಲ—ನಾನೂ ಹೇಳಿಲ್ಲ."

" ಒಳ್ಳೆಯ ಕೆಲಸಮಾಡಿದೆ. ಈಗೇನು ಮಾಡುವುದು ರತ್ನಾ. ಅಚ್ಚಮ್ಮನವರ ಮನೆಯ ವ್ಯವಹಾರದಲ್ಲಿ ನಾವು ಕೈಹಾಕಿದರೆ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸುತ್ತದೆ. ನಿಮ್ಮ ತಾಯಿ ಏನು ಹೇಳಿದರು ? "

" ಅಚ್ಚಮ್ಮನವರ ದುರಾಶೆ ಪೂರೈಸಲು ಯಾರಿಗೆ ಸಾಧ್ಯ—ಆದರೆ ಸುಮ್ಮನಿರುವುದೂ ಸರಿಯಲ್ಲ. ಮುದುಕಿ ಸೀತೆಯನ್ನು ಹುರಿದು ಮುಕ್ಕಿ ಬಿಡುತ್ತಾಳೆ. ಆಗಾಗ್ಗೆ ಸ್ವಲ್ಪವಾದರೂ ಭೂತತೃಪ್ತಿಮಾಡುವುದು ಒಳ್ಳೆಯದು ಎಂದು ಅಮ್ಮ ಅಭಿಪ್ರಾಯಪಟ್ಟಳು."

" ಶ್ರೀನಿವಾಸಮೂರ್ತಿಗೆ ಬರುವುದು ಸಾಲದು. ನಾವು ಅಲ್ಪಸ್ವಲ್ಪವಾದರೂ ಅವನಿಗೆ ಸಹಾಯಮಾಡಬೇಕು — ಆದರೆ ಎಲ್ಲಿಂದ ತರುವುದು ರತ್ನಾ ? "

" ನೀವು ಒಂದು ಕೆಲಸಮಾಡಿ."

" ಏನು ಹೇಳು."

" ಆನೇಕಲ್ಲಿಗೆ ಹೋಗಿ ಸೀತೆಯನ್ನು ನೋಡಿಕೊಂಡು ಬನ್ನಿ."

" ನೀನೂ ಬರುತ್ತೀಯಾ ? "

" ನಾನು ಈಗ ಬರುವುದು ಬೇಡ. ಸೀತಾ ನನಗೆ ಚಾಡಿ ಹೇಳಿದ್ದಾಳೆಂದು ಅಚ್ಚಮ್ಮನವರು ಭಾವಿಸಬಹುದು."

" ಸೀತೂನ ನೋಡುವುದಕ್ಕೆ ಬರಿಗೈಯಲ್ಲಿ ಹೇಗೆ ಹೋಗಲಿ ರತ್ನಾ."

" ಬರಿಗೈಯಲ್ಲಿ ಹೋಗಬೇಡಿ — ನನ್ನಲ್ಲಿ ಸ್ವಲ್ಪ ಹಣವಿದೆ — ತೆಗೆದು ಕೊಂಡು ಹೋಗಿ-ಮೊದಲನೆಯ ತಿಂಗಳು ನೀವು ಕಳಿಸಿದ ಹಣವನ್ನು ಅತ್ತೆಮ್ಮನವರು ನನಗೇ ಕೊಟ್ಟರು—ಅದನ್ನೂ ಇಟ್ಟಿದ್ದೇನೆ."

" ಇದು ಹಣದ ಪ್ರಪಂಚ—ಹಣವಿಲ್ಲದವರು ಈ ಜಗತ್ತಿನಲ್ಲಿ ಬದುಕುವುದೇ ಸಾಧ್ಯವಿಲ್ಲ."

" ಇಲ್ಲಿಗೇ ವರ್ಗಮಾಡಿಸಿಕೊಳ್ಳಲೆತ್ನಿಸಿ."

" ಪ್ರಯತ್ನ ಮಾಡಿದ್ದೇನೆ. ನಮ್ಮ ಎಕ್ಸಿಕ್ಯೂಟಿವ್ ಇಂಜನಿಯರಿಗೆ (Executive Engineer) ನಾನು ಅಚ್ಚುಮೆಚ್ಚಿನವನಾಗಿರುವುದೇ ನನ ಪ್ರಾಣಕ್ಕೆ ಬಂದಿದೆ."

" ಏಕೆ ? "

" ಅವರು ನನ್ನನ್ನು ಬಿಟ್ಟುಕೊಡಲು ಸಿದ್ಧರಾಗಿಲ್ಲ. ಈಗ ಮೂರು ದಿನ ರಜಾ ಕೊಡುವುದಕ್ಕೆ ಗೋಳಾಡಿದರು."

" ಹಾಗಾದರೇನು ಮಾಡುತ್ತೀರಿ ? "

" ಮಾಡುವುದೇನು ? ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಡುತ್ತೇನೆ."

" ಅಯ್ಯೋ—ರಾಜೀನಾಮೆ ಕೊಟ್ಟರೆ ? "

" ಜೋಗಿನಲ್ಲಿ ನನಗೆ ಕೆಲವು ಇಂಜನಿಯರಿಂಗ್ ಫರ್ಮುಗಳ (Firm) ಪರಿಚಯವಾಗಿದೆ. ಶಾಮಸುಂದರ್ ಅಂಡ್ ಕೋ ಅವರು ನನ್ನನ್ನು ಕರೆಯುತ್ತಿದ್ದಾರೆ. ಅವರ ಜತೆ ಸೇರಿಕೊಂಡು ಅದೃಷ್ಟ ಪರೀಕ್ಷೆ ಮಾಡುತ್ತೇನೆ."

" ಸರ್ಕಾರಿ ಕೆಲಸ—ಯಾರಿಗುಂಟು ಯಾರಿಗಿಲ್ಲ."

" ಸರ್ಕಾರಿ ಕೆಲಸದಲ್ಲಿ ಈಗ ಏನೂ ಸ್ವಾರಸ್ಯವಿಲ್ಲ ರತ್ನಾ. ನಮ್ಮಲ್ಲಿ ಯೋಗ್ಯತೆಗೆ ಬೆಲೆಯಿಲ್ಲ. ಜಾತಿವಿದ್ವೇಷ ತುಂಬಿ ತುಳುಕಾಡುತ್ತಿದೆ. ನನ್ನ ಸಹಪಾಠಿಗಳು ಕೆಲವರು, ಮೈಸೂರು ಸರ್ಕಾರದ ಚಾಕರಿ ನಿರಾಕರಿಸಿ, ಉತ್ತರ ಭಾರತಕ್ಕೆ ಹೋಗಿದ್ದಾರೆ—ಕೆಲವರು ಅಸ್ಸಾಮಿಗೆ ಹೋಗಿದ್ದಾರೆ. ಅಲ್ಲಿ ಅವರಿಗೆ ಕೈತುಂಬ ಹಣವೂ ಸಿಕ್ಕುತ್ತಿದೆ. ಮರ್ಯಾದೆಯೂ ದೊರೆಯುತ್ತಿದೆ. ನನ್ನ ಒಬ್ಬ ಸಹಪಾಠಿ ಇಥಿಯೋಪಿಯಾಕ್ಕೆ ಹೋಗಿ ಅಲ್ಲಿ ಕೀರ್ತಿಗಳಿಸಿದ್ದಾನೆ. ಮೈಸೂರು ಮಕ್ಕಳಿಗೆ ಮೈಸೂರಿನಲ್ಲಿ ಬೆಲೆಯಿಲ್ಲ—ಅನ್ನವಿಲ್ಲವಾಗಿದೆ."

" ಸದ್ಯ ನೀವು ಅಸ್ಸಾಮ್, ಇಥಿಯೋಪಿಯಾಕ್ಕೆ ಹೋಗುವ ಯೋಚನೆ ಮಾಡಬೇಡಿ."

" ನಿನ್ನನ್ನು ಬಿಟ್ಟು ಎಲ್ಲಿಗೂ ಹೋಗಲ್ಲ—ಹೆದರಬೇಡ " ಎಂದು ನಕ್ಕ.

# ೨೮

ಸಂಜೆಗೆ ಬಂದುಬಿಡುತ್ತೇನೆ ಎಂದು ಹೇಳಿ ಆನೇಕಲ್ಲಿಗೆ ಹೋದ ರಾಮುಸ್ವಾಮಿ, ಸಂಜೆ ಬರಲಿಲ್ಲ, ಮಾರನೆಯ ಬೆಳಿಗ್ಗೆ ಬಂದ.

" ನಿನ್ನೆ ಸಂಜೆ ಏಕೆ ಬರಲಿಲ್ಲ ? "

ಎಂದು ರತ್ನಾ ಕೇಳಿದಳು.

" ಅಚ್ಚಮ್ಮನವರು ಬಿಡಲಿಲ್ಲ. ನಿನ್ನೆ ರಾತ್ರಿ ನನಗೆ ಔತಣ ಮಾಡಿದರು—ನಿಮ್ಮ ಮನೆಯವರನ್ನೆಲ್ಲಾ ಊಟಕ್ಕೆ ಕರೆದಿದ್ದರು."

" ಸೀತೂ ಹೇಗಿದ್ದಾಳೆ."

" ಸೊರಗಿದ್ದಾಳೆ. ಅವಳ ಮನಸ್ಸಿಗೆ ಉಲ್ಲಾಸವಿಲ್ಲ—ದುಡ್ಡು ಕೊಟ್ಟೆ. ಅವಳು ಕಣ್ಣೀರು ಹಾಕಿಕೊಂಡು ' ನಾನು ಪಾತ್ರೆಗಳು ತರಲಿಲ್ಲವೆಂದು ಅತ್ತೆ ಆಕ್ಷೇಪಿಸುತ್ತಿದ್ದಾರೆ. ಮನೆಯಲ್ಲಿರುವ ಕೆಲವು ಪಾತ್ರೆಗಳನ್ನು ಕಳಿಸಿಕೊಡಲು ಅಮ್ಮನಿಗೆ ಹೇಳು ' ಎಂದಳು."

" ಏನು ಮಾಡುವಿರಿ ? "

" ಪಾತ್ರೆ ವಿಷಯ ಅಮ್ಮನಿಗೆ ಹೇಳಿದ ಕೂಡಲೆ, ಅವಳು ಎಲ್ಲವನ್ನೂ ಊಹಿಸಿಬಿಡುತ್ತಾಳೆ. ಅಮ್ಮನಿಗೆ ತಿಳಿಯದಂತೆ ಹೊಸಪಾತ್ರೆಗಳನ್ನು ಕೊಂಡು ಕೊಡುವುದೇ ಲೇಸು."

" ಹಾಗೇ ಮಾಡಿ. ನಮ್ಮಮ್ಮನಿಗೆ ಒಪ್ಪಿಸಿದರೆ ಈ ಕೆಲಸ ಮಾಡುತ್ತಾಳೆ" ಎಂದಳು.

ರಜಾ ಮುಗಿಯುವುದರೊಳಗಾಗಿ ರಾಮುಸ್ವಾಮಿ ಜೋಗ್ ಸೇರಬೇಕಾಗಿತ್ತು.

ಎರಡು ದಿನಗಳನಂತರ ಅವನು ಜೋಗಿಗೆ ಪ್ರಯಾಣಮಾಡಿದ.

ಮನೆಯ ಪರಿಸ್ಥಿತಿಯನ್ನು ಸುಧಾರಿಸಿ, ತಾಯಿತಂದೆಗಳ ಮನೋವ್ಯಾಕುಲವನ್ನು ಪರಿಹರಿಸಬೇಕೆಂಬ ನಿರ್ಧಾರ ರಾಮುಸ್ವಾಮಿಯ ಮನಸ್ಸಿನಲ್ಲಿ ಮೂಡಿತ್ತು

ಹೇಗೆ ?

ಎನ್ನುವ ಪ್ರಶ್ನೆ ಅವನನ್ನು ಕಾಡಲಾರಂಭಿಸಿತು.

' ಬೆಂಗಳೂರಿಗಾದರೂ ವರ್ಗವಾದರೆ ಬರುವ ಸಂಬಳವನ್ನು ಅಮ್ಮನ ಕೈಗೆ ಹಾಕಬಹುದು. ಇಲ್ಲಿ ನನಗೆ ವೃಥಾ ಖರ್ಚು ! '

ಆದರೆ ದುಡುಕುವುದಕ್ಕೂ ಧೈರ್ಯವಾಗದು.

' ಈಗ ನನ್ನಿಂದ ಮನೆಗೆ ಅಲ್ಪಸ್ವಲ್ಪವಾದರೂ ಸಹಾಯವಾಗುತ್ತಿದೆ—ಅದೂ ನಿಂತುಹೋದರೆ.......'

ಎಂದು ದೀರ್ಘವಾಗಿ ಯೋಚಿಸಲಾರಂಭಿಸಿದ.

ಒಂದು ದಿನ ಪತ್ರಿಕೆಯಲ್ಲಿ ಬಂದ ಸುದ್ದಿ ಅವನ ಮನಸ್ಸಿನಲ್ಲಿ ಹೊಸ ವಿಚಾರವನ್ನು ಕೆರಳಿಸಿತ್ತು.

' ಸುಬ್ಬೂ ಟ್ರಾನ್ಸ್‌ಫರ್ ಆಗಿ ತರೀಕೆರೆಗೆ ಬರುತ್ತಾನೆ. ಸರ್ಕಾರದ ಗಣ್ಯ ಅಧಿಕಾರಿಯಾದ ಅವನಿಂದ ಎಕ್ಸಿಕ್ಯೂಟಿವ್ ಇಂಜನಿಯರಿಗೆ ಒಂದು ಮಾತು ಹೇಳಿದರೆ ನನಗೆ ಟ್ರಾನ್ಸ್‌ಫರ್ ಸಿಕ್ಕಬಹುದು

' ಸುಬ್ಬು ಹೇಳುತ್ತಾನೆಯೋ ?

' ಒಂದು ಮಾತು ಹೇಳುವುದರಿಂದ ಅವನಿಗೇನು ಖರ್ಚಾಗುತ್ತದೆ '

ಎಂದು ಯೋಚಿಸಿ ತರೀಕೆರೆಗೆ ಹೋಗಿಬರಲು ನಿಶ್ಚಯಿಸಿದ.

ಭಾನುವಾರ ರಜಾ ಇದ್ದುದರಿಂದ ಅಸಿಸ್ಟೆಂಟ್ ಕಮಿಷನರ್ ಸಾಹೇಬರು ಮನೆಯಲ್ಲಿಯೇ ಇದ್ದರು. ಹೇಳದೆ ಕೇಳದೆ ರಾಮು ಬಂದುದನ್ನು ಕಂಡು ಸುಬ್ಬುಕೃಷ್ಣನಿಗೆ ಆಶ್ಚರ್ಯವೇ ಆಯಿತು.

" ಏನು ರಾಮು—ಇದ್ದಕ್ಕಿದ್ದಂತೆ ಬಂದೆ ? "

" ನೀನು ತರೀಕೆರೆಗೆ ಬಂದಿದ್ದೀ ಎಂದು ಗೊತ್ತಾಯಿತು. ನಿನ್ನನ್ನೂ ಅತ್ತಿಗೆಮ್ಮನವರನ್ನೂ ನೋಡಿ ಬಹಳ ದಿನಗಳಾಗಿತ್ತು. ನೋಡಿಕೊಂಡು ಹೋಗುವ ಎಂದು ಬಂದೆ—"

ಎಂದು ಒಳಗೆ ಹೋಗಿ ಅತ್ತಿಗೆಯನ್ನು ಮಾತನಾಡಿಸಿದ.

ಮಧ್ಯಾಹ್ನದ ಊಟವಾದ ಮೇಲೆ ಅಣ್ಣ–ತಮ್ಮ ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತರು.

ವಿಶ್ವದ ಸಮಸ್ಯೆಗಳನ್ನೆಲ್ಲಾ ಸುಬ್ಬುಕೃಷ್ಣ ಪ್ರಸ್ತಾಪಿಸಿದರೂ ಮನೆಯ ವಿಷಯ ಎತ್ತಲಿಲ್ಲ.

ರಾಮಸ್ವಾಮಿಯೂ ಉದ್ದೇಶಪೂರ್ವಕವಾಗಿ ಆ ವಿಷಯ ತೆಗೆಯಲಿಲ್ಲ.

"ಇವತ್ತು ಇಲ್ಲೇ ಇರು ರಾಮು."

"ಇಲ್ಲ—ಸಂಜೆಗೆ ನಾನು ಜೋಗಿಗೆ ಹಿಂದಿರುಗಬೇಕು. ನಿನ್ನಿಂದ ಒಂದು ಕೆಲಸವಾಗಬೇಕು ಸುಬ್ಬೂ—"

"ಏನು ಹೇಳು—"

"ನಿನಗೆ ನಮ್ಮ ಎಕ್ಸಿಕ್ಯೂಟಿವ್ ಇಂಜನಿಯರ್ ಮುನಿಸ್ವಾಮಿನಾಯಿಡೂ ಅವರು ಗೊತ್ತೇ?"

"ತಕ್ಕಮಟ್ಟಗೆ ಅವರನ್ನು ಬಲ್ಲೆ."

"ಅವರಿಗೊಂದು ಕಾಗದ ಬರೆದುಕೊಡು."

"ಏನೆಂದು?"

"ನನ್ನನ್ನು ಜೋಗ್‌ನಿಂದ ಬೆಂಗಳೂರಿಗೆ ಟ್ರಾನ್ಸ್‌ಫರ್ ಮಾಡಿರೆಂದು!"

"ಜೋಗ್‌ನಲ್ಲಿ ಅನುಕೂಲವಾಗಿಲ್ಲವೇ?"

"ಅನುಕೂಲದ ಪ್ರಶ್ನೆಯಲ್ಲ—ಕೆಲವು ಕಾರಣಗಳಿಗಾಗಿ ನಾನು ಬೆಂಗಳೂರಿನಲ್ಲಿರಬೇಕಾಗಿದೆ."

ಕ್ಷಣಕಾಲ ಮೌನತಾಳಿದ ಸುಬ್ಬುಕೃಷ್ಣ,

"ನೋಡು ರಾಮು — ಈ ರೀತಿ ಇನ್‌ಫ್ಲುಯನ್ಸ್ ಮಾಡುವುದು ಒಳ್ಳೆಯದಲ್ಲ. ಸರ್ಕಾರಿ ಕೆಲಸಕ್ಕೆ ಸೇರಿದ ಮೇಲೆ ಅವರು ಹೇಳುವಕಡೆ ಕೆಲಸ ಮಾಡುವುದು ಒಳ್ಳೆಯದು."

"ದಾಕ್ಷಿಣ್ಯ ಖರ್ಚುಮಾಡುವುದಕ್ಕೆ ನಿನಗೆ ಇಷ್ಟವಿಲ್ಲ."

"ದಾಕ್ಷಿಣ್ಯ ಖರ್ಚುಮಾಡುವುದು ಒಳ್ಳೆಯದಲ್ಲ!"

" ಹೋಗಲಿ ಬಿಡು—ನಾನು ನಿನ್ನನ್ನು ಕೇಳಿ ತಪ್ಪುಮಾಡಿದೆ" ಎಂದ.

ಸುಬ್ಬುಕೃಷ್ಣ ಏತಕ್ಕೋ ಒಳಗೆದ್ದುಹೋಗಲು, ರಾಮುಸ್ವಾಮಿ ಅಲ್ಲಿಂದ ಹೊರಟು ನೇರವಾಗಿ ಬಸ್‌ಸ್ಟ್ಯಾಂಡಿಗೆ ಬಂದು, ಜೋಗಿನ ಬಸ್ ಹತ್ತಿದ.

ಅಣ್ಣನ ವರ್ತನೆ ಅವನ ಮನಸ್ಸಿಗೆ ನೋವನ್ನುಂಟುಮಾಡಿತ್ತಲ್ಲದೆ ಅವನ ನಿರ್ಧಾರವನ್ನು ಬಲಪಡಿಸಿತು.

ಮಾರನೆಯ ದಿನ ಕಛೇರಿಗೆ ಬಂದ ರಾಮುಸ್ವಾಮಿ ನೇರವಾಗಿ ಎಕ್ಸಿಕ್ಯುಟಿವ್ ಇಂಜನಿಯರ್ ರೂಮ್ ಪ್ರವೇಶಿಸಿದ.

" ಏನು ಸಮಾಚಾರ ಮಿ॥ ರಾಮುಸ್ವಾಮಿ "

ಎಂದು ಮುನಿಸಾಮಿನಾಯಿಡು ಕೇಳಿದರು.

" ನನ್ನ ಟ್ರಾನ್ಸ್‌ಫರ್ ಕೇಳುವುದಕ್ಕೆ ಬಂದೆ ಸಾರ್."

" ಅದು ಸಾಧ್ಯವಿಲ್ಲ ಎಂದು ಹೇಳಿದೆನಲ್ಲ! "

" ನಾನು ಬೆಂಗಳೂರಿಗೆ ಹೋಗುವುದು ಅತ್ಯಗತ್ಯವಾಗಿದೆ."

" ಎಲ್ಲರೂ ಬೆಂಗಳೂರಿಗೆ ಹೋಗಲು ಬಯಸಿದರೆ ಇಲ್ಲಿ ಕೆಲಸ ನಡೆಯುವುದು ಹೇಗೆ? ಪ್ರಾಗ್ರೆಸ್ (Progress) ಸಾಲದು—ಸಾಲದು ಎಂದು ಮಿನಿಸ್ಟರ್ ಒಂದೇ ಸಮನೆ ಬೊಬ್ಬೆ ಹೊಡೆಯುತ್ತಿದ್ದಾರೆ. ಇಲ್ಲಿರುವ ದಡ್ಡರನ್ನು ಕಟ್ಟಿಕೊಂಡು ನಾನು ಪ್ರಾಗ್ರೆಸ್ ಹೇಗೆ ತೋರಿಸಲಿ? ದಕ್ಷರಾಗಿರುವ ಒಬ್ಬಿಬ್ಬರು ನಿಮ್ಮಂಥವರೂ ಹೊರಟುಹೋದರೆ ನನ್ನ ಪಾಡೇನು ? "

" ನಾನು ದಕ್ಷನಾಗಿರುವುದು ಒಂದು ಅಪರಾಧವೇ ಸರ್."

" ಹಾಗಲ್ಲ ರಾಮುಸ್ವಾಮಿ. ನೀವು ಟ್ರಾನ್ಸ್‌ಫರ್ ಕೇಳಬೇಡಿ. ಇಲ್ಲೇ ಇರಿ—ನಿಮಗೆ ಇನ್‌ಕ್ರಿಮೆಂಟ್, ಗ್ರೇಡ್ ಎಲ್ಲಾ ನಾನು ಕೊಡಿಸುತ್ತೇನೆ."

" ಈ ವಿಷಯ ತಾವು ಪುನರಾಲೋಚಿಸುವುದಿಲ್ಲವೇ ಸರ್."

" ಇಲ್ಲ."

" ಹಾಗಾದರೆ ನನ್ನ ರಾಜೀನಾಮೆ ತೆಗೆದುಕೊಳ್ಳಿ."

" ರಾಮುಸ್ವಾಮಿ—are you mad ? "

" ಇಲ್ಲ ಸರ್. ನನಗೆ ಕೆಲಸಕ್ಕಿಂತಲೂ ನನ್ನ ತಾಯಿ–ತಂದೆ ಮುಖ್ಯ. ಅವರಿಗೆ ವಯಸ್ಸಾಗಿದೆ. ನಾನು ಅವರ ಸಮೀಪದಲ್ಲಿರಬೇಕು."

" ರಾಜೀನಾಮೆ ಕೊಟ್ಟು ಮುಂದೇನು ಮಾಡುವಿರಿ ? "

" ಬೆಂಗಳೂರಿನಲ್ಲೇ ಯಾವದಾದರೂ ಪ್ರೈವೇಟ್ ಫರ್ಮ್ ಸೇರಿಕೊಳ್ಳುತ್ತೇನೆ."

" ಈಗಲೂ ನನ್ನ ಮಾತು ಕೇಳಿ—ರಾಜೀನಾಮೆ ಕೊಡಬೇಡಿ."

" ನಾನು ನಿಶ್ಚಯಿಸಿದ್ದಾಗಿದೆ ಸರ್—ಕ್ಷಮಿಸಿ. ಈವರೆಗೆ ನೀವು ನನ್ನ ಬಗ್ಗೆ ತೋರಿದ ವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ "

ಎಂದು ಹೇಳಿ ಅವರ ರೂಮಿನಿಂದ ಹೊರಗೆ ಬಂದ.

೨೯

ಸಣ್ಣಪುಟ್ಟ ಕಂಟ್ರಾಕ್ಟುಗಳನ್ನು ಮಾಡಿಕೊಂಡು ಜೀವನ ಆರಂಭಿಸಿದ ಶಾಮಸುಂದರ ಅವರು ತಮ್ಮ ದಕ್ಷತೆ, ಪ್ರಾಮಾಣಿಕತೆಗಳಿಂದ ದೊಡ್ಡ 'ಇಂಜನಿಯರಿಂಗ್ ಕಂಟ್ರಾಕ್ಟರ'ರಾದರು. ನರಸಿಂಹರಾಜಾ ರಸ್ತೆಯಲ್ಲಿದ್ದ ಅವರ ಕಛೇರಿಯಲ್ಲಿ ಎಂಟು ಜನ ಪದವೀಧರರಾದ ಇಂಜನಿಯರುಗಳೂ, ಇಪ್ಪತ್ತು ಕಾರಕೂನರೂ ಕೆಲಸಮಾಡುತ್ತಿದ್ದರು. ಸರ್ಕಾರ ಕಂಟ್ರಾಕ್ಟುಗಳಂತೂ ಅವರು ಒಲ್ಲೆಯೆಂದ ಮೇಲೇ ಇತರರಿಗೆ ಹೋಗುತ್ತಿದ್ದುದು.

ಶಾಮಸುಂದರ ಅವರು ಬೆಂಗಳೂರು, ಮೈಸೂರುಗಳಲ್ಲಿಯಲ್ಲದೆ ದಾವಣಗೆರೆ, ಹರಿಹರ, ಹುಬ್ಬಳ್ಳಿ, ಧಾರವಾಡ, ಜೋಗ್‌ಗಳಲ್ಲಿಯೂ ಕಂಟ್ರಾಕ್ಟುಗಳನ್ನು ನಿರ್ವಹಿಸುತ್ತಿದ್ದರು.

ಜೋಗಿನಲ್ಲಿ ಶಾಮಸುಂದರ ಅವರಿಗೆ ರಾಮಸ್ವಾಮಿಯ ಪರಿಚಯವಾಯಿತು. ರಾಮಸ್ವಾಮಿಯ ಕಾರ್ಯದಕ್ಷತೆ, ಕೌಶಲ್ಯ ಕಂಡು ಮೆಚ್ಚಿಕೊಂಡ ಶಾಮಸುಂದರ,

"ನಿಮ್ಮಂಥವರು ನೌಕರಿಗೆ ಸೇರಬಾರದು ಮಿ|| ರಾಮಸ್ವಾಮಿ."

"ಏಕೆ ಸಾರ್."

"ನೌಕರಿಯಲ್ಲಿ ನಿಮಗೆ ಯಾವ ಸ್ವಾತಂತ್ರ್ಯವೂ ಇರುವುದಿಲ್ಲ. ನಿಮ್ಮ ಪ್ರತಿಭೆ ಪ್ರಕಾಶಕ್ಕೆ ಬರಲು ಸಾಧ್ಯವೇ ಇಲ್ಲ. ನಿಮ್ಮಂಥವರು ಸ್ವತಂತ್ರರಾಗಿದ್ದುಕೊಂಡು, ವೃತ್ತಿ ಮುಂದುವರಿಸಬೇಕು."

"ಸ್ವತಂತ್ರನಾಗಿರಲು ಸಾಧ್ಯವಿಲ್ಲ ಸರ್. ನನಗೂ ಹಲವು ಜವಾಬ್ದಾರಿಗಳಿವೆ. ಅಲ್ಲದೆ ಸ್ವತಂತ್ರವೃತ್ತಿ ಕೈಗೊಳ್ಳಲು ಬಂಡವಾಳ ಬೇಕು."

"ಯಾವ ಕಾರಣಕ್ಕಾಗಿಯಾದರೂ ನೀವು ಜೋಗ್ ಬಿಡುವುದಾದರೆ, ಬೆಂಗಳೂರಿಗೆ ಬಂದು ನನ್ನನ್ನು ನೋಡಿ."

" ಆಗಬಹುದು "

ಎಂದೆದ್ದ.

ಬೆಂಗಳೂರು ತಲುಪಿದ ಮೂರನೆಯ ದಿನವೇ ಶಾಮಸುಂದರ ಅವರ ಆಫೀಸಿಗೆ ಹೋದ ರಾಮಸ್ವಾಮಿ ಅವರನ್ನು ನೋಡಬಯಸಿದ.

ರಾಮಸ್ವಾಮಿಯ ಹೆಸರಿದ್ದ ಚೀಟಿಯನ್ನು ನೋಡಿದ ಶಾಮಸುಂದರ್ ಅವನನ್ನು ಕೂಡಲೆ ಒಳಗೆ ಬರಮಾಡಿಕೊಂಡು, ಹಸ್ತಲಾಘವವಿತ್ತು,

" ಯಾವಾಗ ಬಂದಿರಿ ಮಿ|| ರಾಮಸ್ವಾಮಿ—" ಎಂದರು.

" ನಿನ್ನೆ ಬಂದೆ."

" ಇಲ್ಲಿ ಎಷ್ಟು ದಿನ ಇರುತ್ತೀರಿ ? "

" ಜೋಗಿನ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬಂದೆ ಸರ್."

" ಏಕೆ—ಮುನಿಸಾಮಿನಾಯಿಡು ನಿಮ್ಮ ಕೆಲಸವನ್ನು ಬಹಳ ಮೆಚ್ಚಿಕೊಳ್ಳುತ್ತಿದ್ದರು."

" ಹೌದು. ನನಗೆ ಈ ಊರಿಗೆ ಟ್ರಾನ್ಸ್‌ಫರ್ ಬೇಕಾಗಿತ್ತು. ಟ್ರಾನ್ಸ್‌ಫರ್ ಕೊಡುವುದಿಲ್ಲ ಎಂದರು. ಕೆಲಸಕ್ಕೆ ರಾಜಿನಾಮೆಯಿತ್ತೆ."

" ಇಲ್ಲಿ ಏನು ಮಾಡಬೇಕೆಂದಿರುವಿರಿ ? "

" ನೀವು ತೆಗೆದುಕೊಳ್ಳುವುದಾದರೆ ನಿಮ್ಮ ಫರ್ಮ್ (Firm) ಸೇರಲು ಸಿದ್ಧನಾಗಿದ್ದೇನೆ."

" ಬಹಳ ಸಂತೋಷ. ನಾನು ರಾಜಗೋಪಾಲ್ ಅವರನ್ನು ಹರಿಹರದ ಬ್ರಾಂಚ್‌ಗೆ ಕಳಿಸಬೇಕಾಗಿದೆ. ಅವರ ಸ್ಥಳಕ್ಕೆ ಯಾರನ್ನು ಹಾಕಲಿ ಎಂದು ಯೋಚಿಸುತ್ತಿದ್ದೆ. ಕೆಲಸಕ್ಕೆ ಯಾವಾಗ ಬರಲು ನಿಮಗೆ ಸಾಧ್ಯ."

" ನಾಳೆಯಿಂದಲೇ ಬರುತ್ತೇನೆ."

" ಇಂಡಸ್ಟ್ರಿಯಲ್ ಏರಿಯಾದಲ್ಲಿ (Industrial area) ನಾವು ಒಂದು ಫ್ಯಾಕ್ಟರಿ ಕಟ್ಟಡ ಕಟ್ಟುತ್ತಿದ್ದೇವೆ. ಕೆಲಸ ಮುಕ್ಕಾಲು ಮುಗಿದಿದೆ—ಅದನ್ನು ಪೂರೈಸಬಲ್ಲಿರಾ ? "

" ಆಗಬಹುದು. ಫ್ಯಾಕ್ಟರಿ ಯಾರದು ? "

" ಅಪ್ಪಾದೊರೆ ಮೊದಲಿಯಾರರದು—ನಿಮಗೆ ಸಂಬಳ ಎಷ್ಟು ಬೇಕು ? "

" ಜೋಗಿನಲ್ಲಿ ನನಗೆ ರೂ. ೧೮೦ ಬರುತ್ತಿತ್ತು."

“ ರೂ. ೨೫೦ ರಿಂದ ಆರಂಭಿಸುತ್ತೇನೆ—ಸಾಕೇ ? ”

“ ಸಾಕು.”

“ ಡಿಸೆಂಬರ್ ಕೊನೆಯೊಳಗಾಗಿ ಕಟ್ಟಡ ಮುಗಿಸುತ್ತೇವೆಂದು ನಾವು ಅಪ್ಪಾದೊರೆ ಮೊದಲಿಯಾರರಿಗೆ ಬರೆದುಕೊಟ್ಟಿದ್ದೇವೆ—ಇನ್ನೂ ಎರಡು ತಿಂಗಳಿದೆ. ನೀವು ಶ್ರಮವಹಿಸಿ ಕಟ್ಟಡವನ್ನು ನಿರ್ದಿಷ್ಟವೇಳೆಗೆ ಮುಗಿಸಬೇಕು.”

“ ಪ್ರಯತ್ನಿಸುತ್ತೇನೆ.”

“ ಬೆಳಿಗ್ಗೆ ಏಳಕ್ಕೆ ಇಲ್ಲಿಗೆ ಬನ್ನಿ—ನಾನೇ ನಿಮ್ಮ ಜತೆ ಬಂದು ವರ್ಕ್ಸ್ಪಾಟ್ (Work-spot) ತೋರಿಸುತ್ತೇನೆ. ನಾಳೆ ಕಂಟ್ರ್ಯಾಕ್ಟಿಗೆ ರುಜು ಮಾಡಬೇಕಾಗುತ್ತದೆ.”

“ ಎಷ್ಟು ವರ್ಷಕ್ಕೆ.”

“ ಮೂರು ವರ್ಷಕ್ಕೆ ! ”

“ ಸ್ಕೇಲು (Scale) ”

“ ರೂ. ೨೫೦ + ೧೦೦—ಸಾವಿರದವರೆಗೆ. ಈ ವಿಷಯ ನನಗೆ ಬಿಡಿ. ನೀವು ಶ್ರದ್ಧೆಯಿಟ್ಟು ಕೆಲಸಮಾಡಿ–ನಿಮಗೆ ಅತೃಪ್ತಿಯಾಗದಂತೆ ನಾನು ನೋಡಿಕೊಳ್ಳುತ್ತೇನೆ.”

“ ಥ್ಯಾಂಕ್ಸ್ ಸರ್ ”

ಎಂದು ರಾಮುಸ್ವಾಮಿ ಮೇಲಕ್ಕೇಳಲು,

“ ಸ್ವಲ್ಪ ಕುಳಿತುಕೊಳ್ಳಿ ”

ಎಂದು ಕರೆಗಂಟೆ (Calling Bell) ಬಾರಿಸಲು. ಒಬ್ಬ ಸೇವಕ ಬಂದ.

“ ಸಿಂಗಂ, ಎರಡು ಕಪ್ ಕಾಫಿ ತೆಗೆದುಕೊಂಡು ಬಾ ”

ಎಂದು ಮೇಜಿನ ಮೇಲಿದ್ದ ಗೋಲ್ಡ್‌ಫ್ಲೇಕ್ ಟಿನ್ ರಾಮುಸ್ವಾಮಿ ಮುಂದೆ ಹಿಡಿದರು.

“ ಕ್ಷಮಿಸಿ ಸರ್–ನಾನು ಸಿಗರೇಟ್ ಸೇದಲ್ಲ.”

“ ವೆರಿ ಗುಡ್ (Very Good) ”

ಎಂದು ತಾವು ಸಿಗರೇಟ್ ಹೊತ್ತಿಸಿಕೊಂಡರು.

ಸಿಂಗಂ ಕಾಫಿ ತಂದಿಟ್ಟು ಹೋದ.

ಶಾಮಸುಂದರ ಕೈಗೆ ಕಾಫಿ ಕಪ್ ತೆಗೆದುಕೊಂಡು, ಸ್ವಲ್ಪ ಸ್ವಲ್ಪ ಸವಿಯುತ್ತಾ,

" ನಾನೂ ಬಡತನದಲ್ಲಿಯೇ ಬೆಳೆದವನು ಮಿ॥ ರಾಮಸ್ವಾಮಿ."

" ಕೇಳಿದ್ದೇನೆ ಸಾರ್."

" ಸಣ್ಣಪುಟ್ಟ ಕಂಟ್ರಾಕ್ಟುಗಳಿಂದ ಜೀವನ ಆರಂಭಿಸಿದೆ. ದೇವರನ್ನು ನಂಬಿಕೊಂಡು ಕಷ್ಟಪಟ್ಟು ದುಡಿದೆ. ನನ್ನ ಶ್ರಮ ಸಾರ್ಥಕವಾಯಿತು. ಭಗವಂತ ಕೈಯೆತ್ತಿಕೊಟ್ಟ. ಮೆಲ್ಲಮೆಲ್ಲನೆ ನನ್ನ ಕಾರ್ಯಕ್ಷೇತ್ರ ವಿಸ್ತರಿಸುತ್ತ ಈ ಸ್ಥಿತಿಗೆ ಬಂದೆ. ನನ್ನ ಕಛೇರಿಯಲ್ಲಿ ಎಂಟು ಜನ ಇಂಜನಿಯರುಗಳಿದ್ದಾರೆ. ಅವರಿಗೆ ರೂ. ೪೫೦ ರಿಂದ ರೂ. ೧೫೦೦ ರವರೆಗೆ ಸಂಬಳ ಕೊಡುತ್ತಿದ್ದೇನೆ. ಜಯರಾವ್, ರಾಜಗೋಪಾಲ್, ಮಹೇಶ ಇವರು ಮೂವರನ್ನೂ ವಿಲಾಯಿತಿಗೆ ಕಳಿಸಿದ್ದೆ. ನಾನೂ ನನ್ನ ನೌಕರರೂ ಒಂದು ಸಂಸಾರದವರಂತೆ ಇದ್ದೇವೆ. ವೃತ್ತಿಗೌರವಕ್ಕೆ ಕಿಂಚಿತ್ತಾದ ಧಕ್ಕೆ ಬಾರದಂತೆ ನಾವು ವರ್ತಿಸುತ್ತಿರುವುದರಿಂದ ನಮಗೆ ಲಾಭವಾಗಿದೆಯೇ ವಿನಾ ನಷ್ಟವಾಗಿಲ್ಲ."

" ನಿಮ್ಮ ಕಂಪೆನಿಯ ಆದರ್ಶವನ್ನು ಪಾಲಿಸುತ್ತೇನೆಂದು ನಾನು ಆಶ್ವಾಸನ ಕೊಡಬಲ್ಲೆ."

" ಒಳ್ಳೆಯದು–ಹೋಗಿ ಬನ್ನಿ–ಬೆಳಿಗ್ಗೆ ಏಳಕ್ಕೆ ಸರಿಯಾಗಿ ಬನ್ನಿ" ಎಂದರು.

ರಾಮಸ್ವಾಮಿಗೆ ಹೊಸ ಕೆಲಸ ಕೂಡಲೆ ಸಿಕ್ಕಿದುದಲ್ಲದೆ ಸಂಬಳದಲ್ಲಿ ಎಪ್ಪತ್ತು ರೂಪಾಯಿ ಬಡ್ತಿ ಸಿಕ್ಕಿದುದನ್ನು ಕಂಡು ಕಮಲಾಕ್ಷಮ್ಮ ಹಿರಿಹಿರಿ ಹಿಗ್ಗಿದರು.

ಬೆಳಗಾದೀತೇ ಎಂದು ಕಾದಿದ್ದ ರಾಮಸ್ವಾಮಿ ಏಳಕ್ಕೆ ಸರಿಯಾಗಿ ಶಾಮಸುಂದರ್ ಅವರ ಕಛೇರಿಗೆ ಬಂದ. ಅವನಿಗಾಗಿ ಕಾದಿದ್ದ ಶಾಮಸುಂದರ್ ಕಂಟ್ರಾಕ್ಟಿನ ಪ್ರತಿಗಳನ್ನು ಅವನ ಕೈಗಿತ್ತರು. ಒಂದಕ್ಕೆ ರಾಮಸ್ವಾಮಿ ರುಜು ಮಾಡಿ ಅವರಿಗಿತ್ತ.

ಕಂಟ್ರಾಕ್ಟನ್ನು ತಮ್ಮ ಮೇಜಿನ ಡ್ರಾಯರಿನಲ್ಲಿಟ್ಟ ಶಾಮಸುಂದರ್, ಒಂದು ಚೆಕ್ ತೆಗೆದು ರಾಮಸ್ವಾಮಿಗಿತ್ತರು.

" ಇದು ಏಕೆ ಸರ್."

“ ಒಂದು ತಿಂಗಳ ಅಡ್ವಾನ್ಸ್ (Advance)—”

“ ಇದನ್ನು ನಾನು ತೀರಿಸುವ ಬಗೆ ? ”

“ ವರ್ಷಾಂತ್ಯದ ಬೋನಸ್‌ನಲ್ಲಿ ಮುರಿದುಕೊಳ್ಳುತ್ತೇವೆ. ಇನ್ನು ಹೊರಡೋಣವೇ ? ”

“ ಆಗಬಹುದು ”

ಎಂದು ಮೇಲಕ್ಕೆದ್ದ.

ಶಾಮಸುಂದರ್ ರಾಮಸ್ವಾಮಿಯೊಂದಿಗೆ ಇಂಡಸ್ಟ್ರಿಯಲ್ ಏರಿಯಾಗೆ ಬಂದರು.

# ೩೦

ತ್ರಿಕರಣಪೂರ್ವಕವಾಗಿ ಜೀವನರಂಗದಲ್ಲಿ ಧುಮ್ಮಿಕ್ಕಿದ್ದ ರಾಮಸ್ವಾಮಿಗೆ ಸ್ವಲ್ಪವೂ ಬಿಡುವಿಲ್ಲವಾಯಿತು.

ಶಾಮಸುಂದರರ ಕಂಪೆನಿಯಲ್ಲಿ ಇದು ಅವನ ಪ್ರಥಮ ಕೆಲಸವಾಗಿತ್ತು—ಎರಡು ತಿಂಗಳಿನಲ್ಲಿ ಕೆಲಸ ಮುಗಿಸಿ, ಶಾಮಸುಂದರ್ ಅವರ ಪ್ರಶಸ್ತಿಯನ್ನು ಗಳಿಸಿಕೊಳ್ಳಲು ಅವನು ಕಾತರಗೊಂಡ.

ಬೆಳಿಗ್ಗೆ ಏಳು ಗಂಟೆಗೇ ಕಂಪೆನಿಯ ಕಾರ್ ಬಂದು, ಅವನನ್ನು ವರ್ಕ್ಸ್‌ಸ್ಪಾಟಿಗೆ ಕರೆದೊಯ್ಯುತ್ತಿತ್ತು. ಅನುಕೂಲವಿದ್ದ ದಿನಗಳಲ್ಲಿ, ಮಧ್ಯಾಹ್ನ ಮನೆಗೆ ಊಟಕ್ಕೆ ಬರುತ್ತಿದ್ದ. ಕೆಲವು ದಿನಗಳು ಅವನು ಹೋಟಲಿನಿಂದ ಇಡ್ಡಲಿ ತರಿಸಿ ತಿಂದು ತೃಪ್ತನಾಗಬೇಕಾಗಿತ್ತು.

'ನಮ್ಮ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಮಗನನ್ನು ಹೀಗೆ ಗಾಣದೆತ್ತಿನಂತೆ ದುಡಿಸಬೇಕಲ್ಲಾ'

ಎಂದು ಕಮಲಾಕ್ಷಮ್ಮ ಮಮ್ಮಲ ಮರುಗುತ್ತಿದ್ದರು.

ರಾಮಸ್ವಾಮಿಯ ದೃಷ್ಟಿ ಅಪ್ಪಾದೊರೆ ಮೊದಲಿಯಾರರ ಫ್ಯಾಕ್ಟರಿ ಕಟ್ಟಡದಲ್ಲಿ ಕೇಂದ್ರೀಕೃತವಾಯಿತು. ಅದರಾಚೆ ಜಗತ್ತು ಒಂದಿದೆಯೆಂಬುದು ಅವನ ಸ್ಮೃತಿಪಥದಲ್ಲಿ ಉಳಿಯಲಿಲ್ಲ.

ರಾಮಸ್ವಾಮಿಯ ದಕ್ಷತೆ, ಶ್ರದ್ಧೆ, ಕರ್ಮಕೌಶಲ್ಯಗಳನ್ನು ಮನಸಾರೆ ಮೆಚ್ಚಿಕೊಂಡಿದ್ದವನು ಮೇಸ್ತ್ರಿ ಮುನಿಸ್ವಾಮಪ್ಪ.

ಅನುಭವಿಕನೂ ಕುಶಲಕಾರ್ಮಿಕನೂ ಆಗಿದ್ದ ಮುನಿಸ್ವಾಮಪ್ಪ, ರಾಮಸ್ವಾಮಿ ಬಂದಾಗ ಅವನನ್ನು ಹೃತ್ಪೂರ್ವಕ ಸ್ವಾಗತಿಸಲಿಲ್ಲ.

'ನಿನ್ನೆ ಮೊನ್ನೆ ಕಾಲೇಜುಬಿಟ್ಟ ಈ ಹುಡುಗಮುಂಡೇವು ನಮಗೆ ಪಾಠ ಕಲಿಸುವುದಕ್ಕೆ ಬರತ್ವೆ'

ಎಂದು ಖತಿಗೊಂಡಿದ್ದ.

ರಾಮುಸ್ವಾಮಿ ಕಲಿಸಲು ಬಂದಿರಲಿಲ್ಲ; ಕಲಿಯಲು ಬಂದಿದ್ದ.

ಕೆಲವೇ ದಿನಗಳಲ್ಲಿ ರಾಮುಸ್ವಾಮಿಯನ್ನು ಅರ್ಥಮಾಡಿಕೊಂಡಿದ್ದ ಮುನಿಸ್ವಾಮಪ್ಪ ' ಶೀತಲಯುದ್ಧ 'ವನ್ನು ಕೊನೆಗಾಣಿಸಿದ್ದ.

' ರಾಮುಸ್ವಾಮಿ ವಿದ್ಯಾವಂತನಾದರೂ ನಿರಹಂಕಾರಿ—ಅವನು ಕಾರ್ಮಿಕ ಪಕ್ಷಪಾತಿ '

ಎನ್ನುವದನ್ನರಿತ ಮುನಿಸ್ವಾಮಪ್ಪ ತಾನಾಗಿಯೇ ರಾಮುಸ್ವಾಮಿಯ ಸ್ನೇಹ ಬೆಳಸಿದ್ದ.

ಅಪ್ಪಾದೊರೆ ಮೊದಲಿಯಾರರು ಆಗಾಗ್ಗೆ ವರ್ಕ್ಸ್ಪಾಟಿಗೆ ಬಂದು, ತರುಣ ಇಂಜನಿಯರರ ಪ್ರಗತಿಯನ್ನು ಗಮನಿಸುತ್ತಿದ್ದರು. ಬಂದಾಗಲೆಲ್ಲಾ ಕಟ್ಟಡ ಡಿಸೆಂಬರ್ ಕೊನೆಯೊಳಗಾಗಿ ಸಿದ್ಧವಾಗಬೇಕೆಂಬುದನ್ನು ಅವರು ರಾಮುಸ್ವಾಮಿಗೆ ನೆನಪಿಸುತ್ತಿದ್ದರು.

ಒಂದು ದಿನ ರಾಮುಸ್ವಾಮಿ ವರ್ಕ್ಸ್ಪಾಟ್‌ನಲ್ಲಿ ಕುಳಿತು ಫ್ಯಾಕ್ಟರಿಯ ನಕ್ಷೆಗಳನ್ನು ಪರಿಶೀಲಿಸುತ್ತಿದ್ದ.

ಅವನ ತಲೆಗೊಂದು ಹೊಸ ವಿಚಾರ ಹೊಳೆಯಿತು. ಅದನ್ನು ಕಾರ್ಯೋನ್ಮುಖಮಾಡಲು ಧೈರ್ಯ ಸಾಲದು.

ಮೇಸ್ತ್ರಿಗೆ ಹೇಳಿ ಕಳಿಸಿದ.

ಮುನಿಸ್ವಾಮಪ್ಪ ಬರಲು,

" ಕುಳಿತುಕೊಳ್ಳಿ ಮುನಿಸ್ವಾಮಪ್ಪನವರೇ—ಒಂದು ವಿಷಯದ ಬಗ್ಗೆ ನಾನು ನಿಮ್ಮ ಅಭಿಪ್ರಾಯ ಕೇಳಬೇಕಾಗಿದೆ."

" ಹೇಳಿ ಸ್ವಾಮಿ."

" ಅಪ್ಪಾದೊರೆ ಮೊದಲಿಯಾರರಿಗೂ, ನಮ್ಮ ಕಂಪೆನಿಗೂ ಆಗಿರುವ ಒಪ್ಪಂದದ ಪ್ರಕಾರ ನಾವು ಫ್ಯಾಕ್ಟರಿ ಕಟ್ಟಡ ಮುಗಿಸಿಕೊಡುತ್ತೇವೆ."

" ಮುಗಿಸಿಕೊಡಲೇ ಬೇಕು—ಇಲ್ಲದಿದ್ದರೆ ದಂಡ ತೆರಬೇಕಾಗುತ್ತದೆ."

" ನಮ್ಮದು ಸುಪ್ರಸಿದ್ಧ ಕಂಪೆನಿ."

" ಹೌದು."

" ನಮ್ಮಷ್ಟು ಪ್ರಸಿದ್ಧಿಗೆ ಬಾರದಿರುವ ನೂರಾರು ಇಂಜನಿಯರಿಂಗ್ ಕಂಪೆನಿ ಬೆಂಗಳೂರಿನಲ್ಲಿ ಇರುವವಷ್ಟೆ ! "

" ಇವೆ."

" ಅವರಿಗೂ ನಮಗೂ ಏನು ವ್ಯತ್ಯಾಸ ? "

" ನಾವು ನೀಯತ್ತಿನಿಂದ ಕೆಲಸಮಾಡಿ, ಗಿರಾಕಿಗಳ ವಿಶ್ವಾಸ ಸಂಪಾದಿಸುತ್ತೇವೆ."

" ಅದು ಸರಿ—ಒಪ್ಪಿದೆ—ಗುಣೈಕದೃಷ್ಟಿಯಿಂದ ? "

" ನಿಮ್ಮ ಪ್ರಶ್ನೆ ನನಗೆ ಸರಿಯಾಗಿ ಅರ್ಥವಾಗಿಲ್ಲ."

" ಬಿಡಿಸಿ ಹೇಳುತ್ತೇನೆ—ಕೇಳಿ—ಬೇಲೂರು, ಹಳೆಯಬೀಡು, ಸೋಮನಾಥಪುರ ಹೊಯಿಸಳ ಶಿಲ್ಪಕಲಾಸಂಪ್ರದಾಯಕ್ಕೆ ಸೇರಿದ ದೇವಾಲಯಗಳು. ಆ ಮಾದರಿಯನ್ನು ಅನುಸರಿಸಿದ — ಅನುಕರಿಸಿದ ಯಾವ ದೇವಾಲಯ ನೋಡಿದರೂ ನಾವು ಥಟ್ಟನೆ ' ಇದು ಹೊಯಿಸಳ ಸಂಪ್ರದಾಯದ್ದು ' ಎಂದು ಹೇಳುತ್ತೇವೆ—ಅಲ್ಲವೇ ? "

" ಹೌದು."

" ಹಾಗೆ ಇಂದಿನ ಕಟ್ಟಡಗಳನ್ನು ನೋಡಿ ' ಇದು ಶ್ಯಾಮಸುಂದರ್ ಅವರು ಕಟ್ಟಿಸಿದ್ದು ' ಎಂದು ಹೇಳಲು ಶಕ್ಯವೇ ? "

" ಇಲ್ಲ."

" ನಾವು ಕಟ್ಟುವುದು ಶಾಲೆಯಾಗಲಿ, ಫ್ಯಾಕ್ಟರಿಯಾಗಲಿ, ಸರ್ಕಾರಿ ಕಛೇರಿಯಾಗಲಿ ವೈಶಿಷ್ಟ್ಯಪೂರ್ಣವಾಗಿರಬೇಕೆಂಬುದು ನನ್ನ ಅಪೇಕ್ಷೆ."

" ಅದಕ್ಕೆ ಬಹಳ ಕಾಲಾವಕಾಶಬೇಕು–ಖರ್ಚೂ ಹೆಚ್ಚು–ಗಿರಾಕಿಗಳು ಒಪ್ಪಬೇಕಲ್ಲ ! "

" ಖರ್ಚು ಹೆಚ್ಚಾಗದಂತೆ ನಾನೊಂದು ಯೋಚನೆ ಮಾಡಿದ್ದೇನೆ."

" ಹೇಳಿ."

" ಅಪ್ಪಾದೊರೆ ಮೊದಲಿಯಾರರು ಕಟ್ಟಿಸುತ್ತಿರುವುದು ಸಿಲ್ಕ್ ಫ್ಯಾಕ್ಟರಿ–ಮುಹಾದ್ವಾರ ನೋಡಿದ ಕೂಡಲೆ ಇದು ಸಿಲ್ಕ್ ಫ್ಯಾಕ್ಟರಿ ಎಂಬುದು ಪ್ರೇಕ್ಷಕನಿಗೆ ಮನವರಿಕೆಯಾಗಬೇಕು "

ಎಂದು ಸ್ಥೂಲವಾಗಿ ' ಫ್ರಂಟ್ ಎಲಿವೇಷನ್ ' ಗುರುತಿಸಿ ತೋರಿಧ.

ಮುನಿಸ್ವಾಮಪ್ಪ ವಿಸ್ಮಯಗೊಂಡು,

" ನಿಮ್ಮ ಯೋಚನೆ ಚೆನ್ನಾಗಿದೆ. ಆದರೆ ಇದಕ್ಕೆ ಸಾಹುಕಾರರು ಒಪ್ಪುತ್ತಾರೆಯೇ ? "

" ಫ್ರಂಟ್ ಎಲಿವೇಷ್ಹ ಬದಲಾಯಿಸಲು ಅವಕಾಶಕೊಡಿ ಎಂದು ನಾನು ಸಾಹುಕಾರರನ್ನು ಪ್ರಾರ್ಥಿಸುತ್ತೇನೆ — ನೀವು ನನ್ನೊಂದಿಗೆ ಸಹಕರಿಸಲು ಒಪ್ಪುವುದಾದರೆ..............."

" ನನ್ನ ವಿಷಯ ಬಿಡಿ ಸ್ವಾಮಿ—ಎಂದಿದ್ದರೂ ನಾನು ನಿಮ್ಮವನು "

ಎಂದು ಮುನಿಸ್ವಾಮಪ್ಪ ಆಶ್ವಾಸನವಿತ್ತ.

ಮಾರನೆಯ ದಿನ ತನ್ನ ಯೋಜನೆಯನ್ನು ರಾಮಸ್ವಾಮಿ, ಶಾಮಸುಂದರ್ ಅವರೆದುರಿಗೆ ಮಂಡಿಸಲು, ಅವರು,

" ಮೊದಲು ಕಾಲಾವಧಿಯನ್ನು ಲಕ್ಷ್ಯದಲ್ಲಿಟ್ಟುಕೊಳ್ಳಿ—ಎರಡನೆಯದು ಖರ್ಚು ಹೆಚ್ಚಾಗಬಾರದು—ಮೂರನೆಯದು ಅಪ್ಪಾದೊರೆ ಮೊದಲಿಯಾರರು ನಿಮ್ಮ ಸಲಹೆ ಒಪ್ಪಬೇಕು."

" ಮೊದಲನೆಯ ಎರಡು ಅಂಶಗಳು ನನಗಿರಲಿ-ಮೂರನೆಯದು ನಿಮಗೆ ಸೇರಿದ್ದು."

" ನೀವು ವರ್ಕ್‌ಸ್ಪಾಟ್‌ಗೆ ಹೋಗಿ, ನಾನು ಫೋನ್ ಮಾಡಿ ಮೊದಲಿಯಾರರನ್ನು ಅಲ್ಲಿಗೆ ಕಳಿಸಿಕೊಡುತ್ತೇನೆ. ಅವರು ಒಪ್ಪಿದರೆ ನೀವು ಫ್ರಂಟ್ ಎಲಿವೇಷ್ಹ ಬದಲಾಯಿಸಬಹುದು "

ಎಂದು ಹೇಳಿದರು.

ಅಂದೇ ಅಪ್ಪಾದೊರೆ ಮೊದಲಿಯಾರರು ' ವರ್ಕ್‌ಸ್ಪಾಟ 'ಗೆ ಬಂದರು. ಅವರನ್ನು ಒಪ್ಪಿಸುವುದು ಸುಲಭಸಾಧ್ಯವಾಗಲಿಲ್ಲ.

ಹಳೆಯ ಸಂಪ್ರದಾಯದಲ್ಲಿ ಬೆಳೆದಿದ್ದ ಮೊದಲಿಯಾರರು,

" ಫ್ಯಾಕ್ಟರಿಗೇಕೆ ಇಷ್ಟು ಸಿಂಗಾರ. ನಾನು ಬಂಗಲೆ ಕಟ್ಟಿಸಬೇಕೆಂದಿದ್ದೇನೆ. ಅದಕ್ಕೆ ಬೇಕಾದ ಅಲಂಕಾರ ಮಾಡಿ " ಎಂದರು.

" ಬಂಗಲೆ ನಿಮ್ಮ ಸ್ವಂತದ್ದಾಯಿತು ಮೊದಲಿಯಾರರೇ — ಫ್ಯಾಕ್ಟರಿ ಸಾರ್ವಜನಿಕರದು. ಇದರಲ್ಲಿ ನೂರಾರು ಜನ ಕೆಲಸಮಾಡುತ್ತಾರೆ—ಫ್ಯಾಕ್ಟರಿಗೆ

ನೂರಾರು ಜನ ಕಾರ್ಯಾರ್ಥಿಗಳಾಗಿ ಬಂದುಹೋಗುತ್ತಾರೆ. ಅವರೆಲ್ಲರ ಮೇಲೆ ನಿಮ್ಮ ಕಟ್ಟಡ ಸತ್ಪರಿಣಾಮ ಬೀರಬೇಕು.

" ನೀವು ಹೇಳುತ್ತಿರುವುದು ನನಗೆ ಪೂರ್ತಿ ಅರ್ಥವಾಗಿಲ್ಲ ರಾಮಸ್ವಾಮಿಗಳೇ—ನಿಮ್ಮ ಎಲಿವೇಷನ್ನಿನಿಂದ ಕಟ್ಟಡದ ಸೌಂದರ್ಯ ಹೆಚ್ಚುವುದೇ ? "

" ನಿಸ್ಸಂದೇಹವಾಗಿ."

" ಖರ್ಚು ಬೆಳೆಯುವುದಿಲ್ಲವೇ ? "

" ಇಲ್ಲ."

" ಕಾಲದ ಗಡು ? "

" ಡಿಸೆಂಬರ್ ಕೊನೆಯೊಳಗಾಗಿ ಫ್ಯಾಕ್ಟರಿ ಕಟ್ಟಡ ಮುಗಿಸುವ ಜವಾಬ್ದಾರಿ ನನಗಿರಲಿ."

ಮೊದಲಿಯಾರರು ಯೋಚಿಸಿ,

" ಒಳ್ಳೆಯದು—ಎಲ್ಲಾ ನಿಮಗೆ ಬಿಟ್ಟುಬಿಡುತ್ತೇನೆ. ಏನು ಮಾಡುತ್ತೀರೋ—ಮಾಡಿ " ಎಂದರು.

# ೩೧

ರಾಮಸ್ವಾಮಿಯನ್ನು ಕಾಣುವುದೇ ಅವನ ಮನೆಯವರಿಗೆ ದುಸ್ತರ ವಾಗುತ್ತ ಬಂದಿತು.

ರಾಮಸ್ವಾಮಿ ಎರಡು ಷಿಫ್ಟ್ (Shift) ಇಟ್ಟು ಕೆಲಸ ಮಾಡಿಸುತ್ತಿದ್ದ. ರಾತ್ರಿಯ ಷಿಫ್ಟಿನ ಮೇಲ್ವಿಚಾರಣೆ ನೋಡಿಕೊಳ್ಳುತ್ತಾ ಫ್ಯಾಕ್ಟರಿಯಲ್ಲೇ ಇದ್ದು ಬಿಡುತ್ತಿದ್ದ.

ಕಮಲಾಕ್ಷಮ್ಮ ಕಣ್ಣೀರು ಹಾಕುತ್ತಾ,

" ಇದೇನೋ ರಾಮು—ಪಾಪ, ಆ ಹುಡುಗಿ ರತ್ನಾ ಗೋಳಾಡುತ್ತಿದೆ. ಮೂರು ಮೂರು ದಿವಸವಾದರೂ ನಿನ್ನ ಮುಖ ದರ್ಶನವಾಗುವುದಿಲ್ಲವಲ್ಲ! " ಎಂದರು.

" ಇನ್ನೂ ಎರಡು ವಾರಗಳಲ್ಲಿ ಫ್ಯಾಕ್ಟರಿ ಕಟ್ಟಡ ಪೂರೈಸುತ್ತದೆ. ಆ ಮೇಲೆ ನಾನು ಒಂದು ವಾರ ರಜಾ ತೆಗೆದುಕೊಂಡು ಮನೆಯಲ್ಲೇ ಇದ್ದು ಬಿಡುತ್ತೇನಮ್ಮ;

" ಹೊತ್ತಿಗೆ ಹೊತ್ತಿಗೆ ನೀನು ಊಟವನ್ನೂ ಮಾಡದಿದ್ದರೆ........"

" ಊಟ ಎಲ್ಲಿ ಹೋಗುತ್ತದಮ್ಮ "

ಎಂದು ತಾಯಿಯನ್ನು ಸಂತೈಸಿದ.

ನಿರ್ದಿಷ್ಟ ದಿನ ಕಟ್ಟಡ ಪೂರೈಸಿ, ರಾಮಸ್ವಾಮಿ, ಅದನ್ನು ಶಾಮಸುಂದರ್ ಅವರಿಗೆ ಒಪ್ಪಿಸಿದ.

ಅಪ್ಪಾದೊರೆ ಮೊದಲಿಯಾರರು ಜನವರಿ ಐದನೆಯ ತಾರೀಖು ತಮ್ಮ ಫ್ಯಾಕ್ಟರಿಯ ಆರಂಭೋತ್ಸವವನ್ನಿಟ್ಟುಕೊಂಡು, ಅಧ್ಯಕ್ಷತೆಗೆ ವಾಣಿಜ್ಯ, ಕೈಗಾರಿಕಾ ಮಂತ್ರಿಗಳನ್ನು ಆಹ್ವಾನಿಸಿದರು.

ಉತ್ಸವಕ್ಕೆ ಬರಲು ಶಾಮಸುಂದರ್, ರಾಮಸ್ವಾಮಿ, ಮುನಿಸ್ವಾಮಪ್ಪ ನವರಿಗೆ ಆಹ್ವಾನ ಪತ್ರಿಕೆಗಳು ಬಂದಿದ್ದವು.

ಜನವರಿ ಆರನೆಯ ತಾರೀಖು ಸಂಜೆ ಮಂತ್ರಿಗಳ ಅಧ್ಯಕ್ಷತೆಯಲ್ಲಿ ಉತ್ಸವ ಆರಂಭವಾಯಿತು.

ಸ್ವಾಗತ ಭಾಷಣ ಬಿನ್ನವತ್ತಳೆಯ ಅರ್ಪಣೆ ಎಲ್ಲಾ ಮುಗಿದ ಮೇಲೆ ಅಧ್ಯಕ್ಷರು ' ತಮ್ಮ ಬರೆದ ಭಾಷಣ ' ಓದಿದರು.

' ಭೈರಿಗೆ ಸೇವೆ ' ಮುಗಿಸಿದ ಮಾನ್ಯ ಮಂತ್ರಿಗಳು, ಅಪ್ಪಾದೊರೆ ಮೊದಲಿಯಾರರ ಉದ್ಯಮಕ್ಕೆ ಯಶಸ್ಸು ಕೋರುತ್ತಾ,

" ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದ ಇನ್ನೊಂದು ವಿಷಯ ತಮಗೆ ಅರಿಕೆಮಾಡಿಕೊಳ್ಳಬೇಕಾಗಿದೆ. ಅಪ್ಪಾದೊರೆ ಮೊದಲಿಯಾರರ ಫ್ಯಾಕ್ಟರಿಯ ಕಟ್ಟಡ ' ಕೈಗಾರಿಕೆಯ ಗುಡಿ 'ಯಂತಿದೆ. ಇದರ ಮುಖದ್ವಾರ ನೂತನವಾಗಿ, ಆಕರ್ಷಣೀಯವಾಗಿದೆ. ಇದನ್ನು ರಚಿಸಿದ ಶಿಲ್ಪಿಯನ್ನು ನಾನು ಮನವಾರೆ ಅಭಿವಂದಿಸುತ್ತೇನೆ " ಎಂದರು.

ಮಂತ್ರಿಗಳ ಪ್ರಶಂಸೆ ಕೇಳಿ ಹಿರಿಹಿರಿ ಹಿಗ್ಗಿದ ಅಪ್ಪಾದೊರೆ ಮೊದಲಿಯಾರರು, ಅವರ ಕಿವಿಯಲ್ಲೇನೋ ಪಿಸುಗುಟ್ಟಿ,

" ಮ|| ರಾ|| ಶಾಮಸುಂದರ್ ಅವರೂ ಮ|| ರಾ|| ರಾಮಸ್ವಾಮಿಯವರೂ ವೇದಿಕೆಯ ಮೇಲೆ ಬರಬೇಕು " ಎಂದರು.

ಇಬ್ಬರೂ ವೇದಿಕೆಯ ಮೇಲೆ ಬರಲು, ಮಂತ್ರಿಗಳಿಗೆ ಅವರ ಪರಿಚಯ ಮಾಡಿಕೊಟ್ಟು, ಎರಡು ಹಾರ ತರಿಸಿದರು.

ಮಂತ್ರಿಗಳು ಮೊದಲು ಶಾಮಸುಂದರ್ ಅವರಿಗೆ ಹಾರ ಹಾಕಿದರು.

ತರುವಾಯ ರಾಮಸ್ವಾಮಿಗೆ ಹಾರ ಹಾಕಿ,

" ಮುಖದ್ವಾರ ನಿರ್ಮಿಸಿದ ಶಿಲ್ಪಿಗಳು ತರುಣ ಇಂಜನಿಯರಾದ ಶ್ರೀ ರಾಮಸ್ವಾಮಿಗಳೆಂದು ಈಗ ನನಗೆ ಗೊತ್ತಾಯಿತು. ಅವರ ಪ್ರತಿಭೆಯನ್ನು ಮನ್ನಿಸಿ ಶ್ರೀಮಾನ್ ಅಪ್ಪಾದೊರೆ ಮೊದಲಿಯಾರರು ಮುನ್ನೂರು ರೂಪಾಯಿಗಳ ಸಂಭಾವನೆ ಅವರಿಗೆ ಕೊಡಲಿಚ್ಛಿಸಿದ್ದಾರೆ "

ಎಂದು ರಾಮಸ್ವಾಮಿಗೆ ಹಾರ ಹಾಕಿ, ಅವನ ಕೈಗೆ ನೋಟು ಗಳನ್ನಿಟ್ಟರು.

ರಾಮಸ್ವಾಮಿ ಕುತ್ತಿಗೆಯಿಂದ ಹಾರ ತೆಗೆದು, ಕೈಯಲ್ಲಿ ಹಿಡಿದುಕೊಂಡು

"ಮಾನ್ಯ ಮಂತ್ರಿಗಳೇ, ಶ್ರೀ ಅಪ್ಪಾದೊರೆ ಮೊದಲಿಯಾರರೇ ಮಹನೀಯರೇ, ಮಹಿಳೆಯರೇ,

ಮಾನ್ಯ ಮಂತ್ರಿಗಳು ನನ್ನ ಅಲ್ಪಸೇವೆಯನ್ನು ಪ್ರಶಂಸಿಸಿ ನನಗೆ ಮಹದುಪಕಾರಮಾಡಿದ್ದಾರೆ. ಆದರೆ ಈ ಕೀರ್ತಿ ನಿಜವಾಗಿ ಸಲ್ಲಬೇಕಾದುದು ಇತರರಿಗೆ. ತಮ್ಮ ಕಂಪೆನಿಯಲ್ಲಿ ನನಗೆ ಸ್ಥಾನವಿತ್ತು ನನ್ನನ್ನು ಸಾಕಿ ಸಲಹುತ್ತಿರುವ ನನ್ನ ಧಣಿಗಳಾದ ಶ್ರೀ ಶಾಮಸುಂದರ್ ಅವರಿಗೆ ನಾನು ಚಿರಋಣಿ— ಕಟ್ಟಡದ ಮುಖದ್ವಾರದ ರೂಪರೇಷೆಯ ಬಗ್ಗೆ ನಾನು ಸ್ವಾತಂತ್ರ್ಯವಹಿಸಲು ಶ್ರೀ ಅಪ್ಪಾದೊರೆ ಮೊದಲಿಯಾರರು ನನಗೆ ಅವಕಾಶ ಕೊಡದಿದ್ದರೆ, ನಾನು ಈ ಕೆಲಸ ನಿರ್ವಹಿಸಲಾಗುತ್ತಿರಲಿಲ್ಲ. ಅವರಿಗೂ ನಾನು ಋಣಿ.

ಕಲ್ಪನೆ ನನ್ನದಾದರೂ, ಅದನ್ನು ಯಶಸ್ವಿಯಾಗಿ ನಿರ್ವಹಿಸಿದವರು ಮೇಸ್ತ್ರಿ ಶ್ರೀ ಮುನಿಸ್ವಾಮಪ್ಪನವರು. ಈ ಹಿರಿಯ ಅನುಭವಿಗಳು ನನ್ನನ್ನು ತಮ್ಮನಂತೆ ಕಂಡು, ನನ್ನ ಪ್ರಯತ್ನಕ್ಕೆ ಪೂರ್ಣ ಸಹಕಾರ ನೀಡಿದ್ದಾರೆ, ನನ್ನ ಭಾಗಕ್ಕೆ ಬಂದಿರುವ ಕೀರ್ತಿ, ಸಂಭಾವನೆಯ ಅರ್ಧಭಾಗ ನ್ಯಾಯವಾಗಿ ಶ್ರೀ ಮುನಿಸ್ವಾಮಪ್ಪನವರಿಗೆ ಸಲ್ಲಬೇಕು. ಅವರಿಗೆ ತಮ್ಮೆಲ್ಲರೆದುರಿಗೆ ನನ್ನ ಗೌರವ ವ್ಯಕ್ತಪಡಿಸಲು ಅನುಮತಿ ದಯೆಪಾಲಿಸಬೇಕು"

ಎನ್ನಲು, ಶಾಮಸುಂದರ್ ಅವರು ಮುನಿಸ್ವಾಮಪ್ಪನವರನ್ನು ವೇದಿಕೆಗೆ ಬರಮಾಡಿದರು.

ರಾಮಸ್ವಾಮಿ ತನ್ನ ಹಾರವನ್ನು ಮುನಿಸ್ವಾಮಪ್ಪನವರ ಕೊರಳಿಗೆ ಹಾಕಿ, ಸಂಭಾವನೆ ಹಣದ ಅರ್ಧ ಭಾಗ ಅವರ ಕೈಗಿತ್ತ.

ಮುನಿಸ್ವಾಮಪ್ಪ ಎಲ್ಲರಿಗೂ ನಮಸ್ಕರಿಸಿ, ಸ್ವಸ್ಥಾನಕ್ಕೆ ಹೋದರು.

ಸಮಾರಂಭ ರಾಷ್ಟ್ರಗೀತೆಯೊಂದಿಗೆ ಮುಕ್ತಾಯವಾಯಿತು.

## ೩೨

ತನ್ನ ಪ್ರಥಮ ಉದ್ಯಮದಲ್ಲೇ ಯಶಸ್ಸು ಗಳಿಸಿ, ಕಂಪೆನಿಗೂ ಕೀರ್ತಿ ತಂದ ರಾಮುಸ್ವಾಮಿಗೆ ಒಂದು ವಾರ ರಜಾ ಕೊಡಲು ಶಾಮಸುಂದರ್ ಅವರು ಅನುಮಾನಿಸಲಿಲ್ಲ.

"ನನ್ನ ಮುಂದಿನ ಕೆಲಸ ಯಾವದು ಸಾರ್"

ಎಂದು ರಾಮುಸ್ವಾಮಿ ಶಾಮಸುಂದರ್ ಅವರನ್ನು ಕೇಳಿದ.

"ಹಾಲಿಡೇ (Holiday) ಹೋಗುವಾಗ ಕೆಲಸದ ವಿಷಯ ಯೋಚಿಸ ಬಾರದು. ವಿಶ್ರಾಂತಿ ತೆಗೆದುಕೊಂಡು ಬನ್ನಿ—ನಿಮ್ಮ ಕೆಲಸ ಯಾವದು ಎನ್ನುವುದನ್ನು ಆ ಮೇಲೆ ತಿಳಿಸುತ್ತೇನೆ" ಎಂದರು.

ಮನೆಗೆ ಬಂದು ರಾಮುಸ್ವಾಮಿ ತನಗೆ ರಜಾ ಸಿಕ್ಕಿದ ವಿಷಯ ತಾಯಿಗೆ ತಿಳಿಸಲು, ಕಮಲಾಕ್ಷಮ್ಮನವರು,

"ಮೊದಲು ಎಣ್ಣೆನೀರು ಹಾಕಿಕೊಂಡು, ಚೆನ್ನಾಗಿ ಮಲಗಿ ನಿದ್ರಿಸು ರಾಮು" ಎಂದರು.

ತೈಲಭ್ಯಂಜನ, ಸುಖನಿದ್ರೆ, ಮೃಷ್ಟಾನ್ನಭೋಜನದಿಂದ ರಾಮು ಪುಟಗೊಂಡ.

ಎರಡು ದಿನಗಳು ಕಳೆದೇ ಹೋದವು.

ಮೂರನೆಯ ದಿನ ರಾಮು, ತಾಯಿಗೆ,

"ಅಮ್ಮ—ಇನ್ನು ನನಗೆ ನಾಲ್ಕೇ ದಿನಗಳು ರಜಾ. ಸಂಜೆಗೆ ನಾವೇಕೆ ಆನೆಕಲ್ಲಿಗೆ ಹೋಗಿಬರಬಾರದು?"

"ಯಾರು ಯಾರು ಹೋಗುವುದು?"

"ನೀನೂ, ನಾನು, ರತ್ನಾ!"

"ಅವರಿಗೆ ಊಟಕ್ಕೆ ತೊಂದರೆಯಾಗುವುದಲ್ಲಪ್ಪಾ."

“ ಅಣ್ಣನಿಗೆ ಎರಡು ದಿನ ಪದ್ಮನಾಭರಾಯರು ಅನ್ನ ಹಾಕುವುದಿಲ್ಲೆ ಎನ್ನುತ್ತಾರೆಯೇ ? ”

“ ಎಲ್ಲದಕ್ಕೂ ನಾವು ಅವರನ್ನೇ ಪೀಡಿಸಬೇಕಲ್ಲ ರಾಮು.”

“ ಪೀಡಿಸದಿದ್ದರೆ ನಾಗೂಬಾಯಿ ಸಿಟ್ಟಾಗುತ್ತಾರೆ. ನಮ್ಮವರು ನಮಗೆ ಆಗುವುದಿಲ್ಲ ಕಣಮ್ಮ. ಒಂದು ಬಾಯಿಮಾತಿನ ಉಪಕಾರ ಮಾಡುವುದಕ್ಕೂ ನಮ್ಮವರು ಹಿಂಜರಿಯುತ್ತಾರೆ. ಪದ್ಮನಾಭರಾಯರು, ನಾಗೂಬಾಯಿ ನಮಗೆ ಬಂಧುಗಳಲ್ಲ—ಬಳಗವಲ್ಲ. ನಮ್ಮಿಂದ ಅವರು ಉಪಕೃತರೂ ಆಗಿಲ್ಲ. ಅವರೆ ಈ ದಂಪತಿಗಳು ನಮಗಾಗಿ ಹಗಲಿರುಳೂ ದುಡಿಯುತ್ತಿದ್ದಾರೆ. ಭಗವಂತನ ಲೀಲಾವೈಚಿತ್ರ್ಯಗಳಲ್ಲಿ ಇದೂ ಒಂದೆಂದು ಕಾಣುತ್ತದೆ.”

“ ನೀನು ಫ್ಯಾಕ್ಟರಿ ಕೆಲಸ ಮುಗಿಸಿ, ಒಳ್ಳೆಯ ಹೆಸರು ಸಂಪಾದಿಸಿದು ದನ್ನು ನಿಮ್ಮಣ್ಣನಿಗೆ ತಿಳಿಸಿದೆಯಾ ? ”

“ ಇಲ್ಲ.”

“ ಏಕೆ ? ”

“ ಪುರಸತ್ತಾಗಲಿಲ್ಲಮ್ಮ.”

ಮಗನನ್ನು ದಿಟ್ಟಿಸಿ ನೋಡಿದ ಕಮಲಾಕ್ಷಮ್ಮನವರು,

“ ರಾಮೂ, ಸುಬ್ಬೂಗೂ ನಿನಗೂ ಏನಾದರೂ ಮಾತುಕತೆಯಾಯಿತೇ? ”

“ ಇಲ್ಲವಲ್ಲ.”

“ ಈಚೆಗೆ ನೀನು...............”

“ ಹಾಗೇನಿಲ್ಲಮ್ಮ. ಅವನು ದೊಡ್ಡಮನುಷ್ಯ—ಅಸಿಸ್ಟೆಂಟ್ ಕಮಿಷನರ್—ಮೈಸೂರಿನ ಸುಪ್ರಸಿದ್ಧ ಲಾಯರ ಅಳಿಯ ; ನಾನು ಒಬ್ಬ ಬಡ ಮೇಸ್ತ್ರಿ—ಇಟ್ಟಿಗೆ, ಗಾರೆ ಹೊರುವ ಕೂಲಿ. ಅವನಿಗೇಕೆ ನನ್ನಿಂದ ತೊಂದರೆಯಾಗಬೇಕು.”

ಕಮಲಾಕ್ಷಮ್ಮ ನೀರವವಾದರು.

“ ಇವತ್ತು ಮೂರು ಗಂಟೆಗೆ ಹೊರಡೋಣ. ಪೇಟೆಗೆ ಹೋಗಿ ಸೀತೂಗೆ ಏನಾದರೂ ತೆಗೆದುಕೊಂಡು, ಸಂಜೆಗೆ ಆನೇಕಲ್ ತಲಪೋಣ. ನಾನು ಕಂಪೆನಿ ಕಾರೋ, ಸ್ಟೇಷನ್ ವ್ಯಾಗನ್ನೋ ತರಿಸುತ್ತೇನೆ.”

“ ಹಾಗೇ ಆಗಲಿ ” ಎಂದರು.

ಮೂರು ಗಂಟೆಗೆ ಸರಿಯಾಗಿ ಕಮಲಾಕ್ಷಮ್ಮ, ರತ್ನಾ, ರಾಮು ಕಂಪೆನಿಯ ಸ್ಟೇಷನ್ ವ್ಯಾಗನ್ನಿನಲ್ಲಿ ಹೊರಟರು.

ವ್ಯಾಗನ್ ಒಂದು ಪಾತ್ರೆಯ ಅಂಗಡಿ ಮುಂದೆ ನಿಲ್ಲಲು, ಕಮಲಾಕ್ಷಮ್ಮ,

" ಕಾರ್ ಇಲ್ಲೇಕೆ ನಿಲ್ಲಿಸಿದೆ ? " ಎಂದು ಕೇಳಿದರು,

" ಸೀತೂಮನೆಗೆ ಕೆಲವು ಪಾತ್ರೆಗಳು ಬೇಕೆಂದು ರತ್ನಾ ಹೇಳಿದಳು."

ಪಾತ್ರೆ ಅಂಗಡಿಯಲ್ಲಿ ಹಂಡೆ, ಕೊಳದಪ್ಪಲೆ, ಸೆಟ್‌ಪಾತ್ರೆಗಳು, ಕಂಚಿನ ಗ್ಲಾಸುಗಳು, ಸವುಟು, ಮಗುಚುವ ಕೈ, ಬೋಸಿ, ಬಾಣಲೆ, ಇತ್ಯಾದಿಗಳ ಖರೀದಿ ಮುಗಿಸಿ ಎಲ್ಲರೂ ಒಂದು ಜವಳಿ ಅಂಗಡಿಗೆ ಬಂದರು.

ಒಂದು ಧರ್ಮಾವರದ ಸೀರೆ, ಕಣ ಖರೀದಿಯಾದ ಮೇಲೆ ಕಮಲಾಕ್ಷಮ್ಮ,

" ಇದು ಯಾರಿಗೆ ರತ್ನಾ ? " ಎಂದು ಕೇಳಿದರು.

" ಸೀತನಿಗಮ್ಮ."

" ನಿನಗೇನೂ ಬೇಡವೇ ? "

" ನನಗ್ಯಾಕೆ. ಟ್ರಂಕ್ ತುಂಬ ಸೀರೆಗಳಿವೆ."

" ರಾಮು ತೆಗೆದುಕೊಡಲಿ ಸುಮ್ಮನಿರು. ಹೊಸಸೀರೆ ನೀನುಟ್ಟುಕೊಂಡು ಕಳೆಕಳೆಯಾಗಿದ್ದರೆ................"

" ನೀವೂ ಒಂದು ಸೀರೆ ತೆಗೆದುಕೊಳ್ಳುವ ಹಾಗಿದ್ದರೆ ನಾನು ತೆಗೆದು ಕೊಳ್ಳುತ್ತೇನೆ."

ಕಮಲಾಕ್ಷಮ್ಮನವರು ಹುಸಿಮುನಿಸಿನಿಂದ,

" ನನ್ನ ಮಗ ಲಕ್ಷಾಧೀಶ್ವರ ಎಂದು ಭಾವಿಸಿದೆಯೇನೇ ? " ಎಂದರು.

ರತ್ನಾ ನಗುತ್ತಾ,

" ಅದು ನನಗೆ ಗೊತ್ತಿಲ್ಲ. ನಿಮ್ಮ ಮಗ ನಿಮ್ಮ ಮಗ ಎನ್ನುವುದನ್ನು ಬಲ್ಲೆ ಅತ್ತೆ."

ರತ್ನಾ ಕಮಲಾಕ್ಷಮ್ಮ ಇಬ್ಬರೂ ಒಂದೊಂದು ಸೀರೆ, ಕಣ ಆರಿಸಿ ಕೊಂಡರು.

ಎಲ್ಲ ಸಾಮಾನುಗಳನ್ನೂ ವ್ಯಾಗನ್ನಿಗೆ ತುಂಬಿಕೊಂಡು, ರಾಮು, ರತ್ನಾ, ಕಮಲಾಕ್ಷಮ್ಮ ಆನೇಕಲ್ ಅಭಿಮುಖರಾದರು.

ಅವರು ಆನೇಕಲ್ ಮುಟ್ಟುವ ವೇಳೆಗೆ ಆರು ಗಂಟೆಯಾಯಿತು.

ಯಾರ ಮನೆಗೆ ಹೋಗತಕ್ಕದ್ದೆಂಬ ವಿಷಯದಲ್ಲಿ ಜಿಜ್ಞಾಸೆಯೆದ್ದಿತು.

" ರತ್ನನನ್ನು ಮಾವನವರ ಮನೆಯಲ್ಲಿ ಬಿಟ್ಟು ನಾವು ಸೀತೂ ಮನೆಗೆ ಹೋಗೋಣ "

ಎಂದು ರಾಮಸ್ವಾಮಿ ಸೂಚಿಸಿದ.

" ನಾನೊಬ್ಬಳೇ ಹೋಗುವುದಿಲ್ಲ. ನಾನೂ ಸೀತೂ ಮನೆಗೇ ಬರುತ್ತೇನೆ "

ಎಂದು ರತ್ನಾ ಹೇಳಿದಳು.

" ಅಚ್ಚಮ್ಮನವರಿಗೆ ಪೂರ್ವಭಾವಿ ಸೂಚನೆ ಕೊಡದೆ ನಾವೆಲ್ಲರೂ ಅವರ ಮನೆಗೆ ಹೋಗಿ ಧುಮುಕುವುದು ಬೇಡ ರತ್ನಾ. ನೀನು ನಿಮ್ಮ ತಂದೆಯವರ ಮನೆಯಲ್ಲಿರು—ನಾನು ಸೀತೂ ಮನೆಗೆ ಹೋಗಿ ಬರುತ್ತೇನೆ."

" ಅತ್ತೆಮ್ಮನವರು ? "

" ಅಮ್ಮ ನಾಳೆ ಬರುತ್ತಾಳೆ " ಎಂದ.

ರತ್ನಾ ಒಪ್ಪಿಕೊಂಡಳು.

ರತ್ನನನ್ನು ಸೀತಾರಾಮಯ್ಯನವರ ಮನೆಯಲ್ಲಿ ಬಿಟ್ಟು ತಾಯಿ–ಮಗ ಅಚ್ಚಮ್ಮನವರ ಮನೆಗೆ ಹೋದರು.

ಸೀತಾ ಹೌಹಾರಿ ಬಂದು ತಾಯಿಯನ್ನಪ್ಪಿದಳು.

ಅಚ್ಚಮ್ಮನವರು ವಿಶ್ವಾಸಪೂರ್ವಕವಾಗಿ,

" ಬನ್ನಿಯಮ್ಮ—ಬಾಪ್ಪ ರಾಮಣ್ಣ" ಎಂದರು.

" ಭಾವ—ಎಲ್ಲಿ ಅಚ್ಚಮ್ಮನವರೇ."

" ಅವನಿನ್ನೂ ಸ್ಕೂಲಿನಿಂದ ಬಂದಿಲ್ಲ."

" ನಾನು ಹೋಗಿ ಅವನನ್ನು ಕರೆದುಕೊಂಡು ಬರುತ್ತೇನೆ."

" ಕಾಫಿ ತೆಗೆದುಕೊಂಡು ಹೋಗಪ್ಪ."

" ಕಾಫಿ ಇಟ್ಟಿರಿ—ನಾನೂ ಭಾವ ಒಟ್ಟಿಗೆ ಕುಡಿಯುತ್ತೇವೆ."

ವ್ಯಾಗನ್ನಿನ ಡ್ರೈವರು ಸಾಮಾನುಗಳನ್ನೆಲ್ಲಾ ಎತ್ತಿಕೊಂಡು ಹೋಗಿ ಅಚ್ಚಮ್ಮನವರ ಹಜಾರದಲ್ಲಿಟ್ಟು ಬಂದ ಮೇಲೆ ರಾಮಸ್ವಾಮಿ ಅವನೊಂದಿಗೆ ಹೊರಟ.

ಸಾಮಾನುಗಳ ಸಿಂಹಾವಲೋಕನ ಮಾಡಿದ ಅಚ್ಚಮ್ಮ,

" ಇವುಗಳನ್ನೆಲ್ಲಾ ಏಕೆ ತಂದಿರಿ ಕಮಲಾಕ್ಷಮ್ಮ"
ಎಂದು ಕೇಳಿದರು.

" ಸೀತೂ ಮದುವೆಯಲ್ಲೇ, ನಾವು ಇವುಗಳನ್ನು ಕೊಡಬೇಕಾಗಿತ್ತು ಅಚ್ಚಮ್ಮನವರೇ. ಆಗಂತೂ ಗಲಾಟೆ — ಯಾವದಕ್ಕೂ ನಾನು ಗಮನ ಕೊಡಲಾಗಲಿಲ್ಲ."

ಅತ್ತೆಯ ಪ್ರತಿಕ್ರಿಯೆಯನ್ನು ಗಮನಿಸಿದ್ದ ಸೀತಾ ಅವರು ಒಳಗೆ ಹೋಗಲು,

" ಅಮ್ಮಾ, ಈ ಪಾತ್ರೆಗಳು ತಂದು ನೀನು ನನ್ನ ಕಾಪಾಡಿದೆ " ಎಂದಳು.

ಕಮಲಾಕ್ಷಮ್ಮನವರು ಮಗಳಿಗಾಗಿ ತಂದಿದ್ದ ಸೀರೆ, ಕಣ ಅವಳ ಕೈಯಲ್ಲಿಡಲು,

" ಪಾತ್ರೆಗಳ ಜತೆ ಈ ಖರ್ಚನ್ನೂ ಏಕೆ ಹಚ್ಚಿಕೊಂಡೆ ಅಮ್ಮ ? "

" ಇದೆಲ್ಲಾ ರತ್ನನ ಕೆಲಸ ಸೀತೂ—ನನ್ನದಲ್ಲ ! "

" ಅಪ್ಪ ಹೇಗಿದ್ದಾರೆ ? "

" ಚೆನ್ನಾಗಿದ್ದಾರೆ."

" ರಾಮಣ್ಣನಿಗೆ ಹೊಸ ಕೆಲಸ ಹೇಗಿದೆ ? "

ರಾಮಸ್ವಾಮಿಯ ಸಾಧನೆಯನ್ನು ಕಮಲಾಕ್ಷಮ್ಮನವರು ವಿವರಿಸಲು, ಸೀತೂ ಆನಂದಭಾಷ್ಪ ಸುರಿಸುತ್ತಾ,

" ರಾಮಣ್ಣ ಮುಟ್ಟಿದ್ದು ಚಿನ್ನವಾಗತ್ತೆ ಎಂದು ನನಗೆ ಗೊತ್ತಮ್ಮ" ಎಂದಳು.

ಅಚ್ಚಮ್ಮನವರು ಕಾಫಿ ಮಾಡಿ ತಂದು ಕಮಲಾಕ್ಷಮ್ಮನವರಿಗೆ ಕೊಡಲು, ಅವರು,

" ನನಗೇನು ಅವಸರಾಮ್ಮ. ರಾಮು, ಅಳೀಮಯ್ಯಂದಿರು ಬರಲಿ."

" ಆರಿಹೋಗತ್ತೆ — ನೀವು ತೆಗೆದುಕೊಳ್ಳಿ — ಬಂದ ಮೇಲೆ ಅವರಿಗೆ ಕೊಡುತ್ತೇನೆ."

" ಅಮ್ಮ, ಅತ್ತಿಗೆಯನ್ನೇಕೆ ಕರೆದುಕೊಂಡು ಬರಲಿಲ್ಲ ! "

" ರತ್ನನೂ ಬಂದಿದ್ದಾಳೆ ಕಣೇ."

" ಎಲ್ಲಿ ? "

"ತಾಯಿಮನೆಗೆ ಹೋಗಿದ್ದಾಳೆ."

"ಇಲ್ಲೇ ಕರೆತರಬೇಕಾಗಿತ್ತು."

"ಬೆಳಿಗ್ಗೆ ಬರುತ್ತಾಳೆ."

ಎಂದು ರತ್ನನ ಗುಣಕಥನ ಆರಂಭಿಸಿದರು.

ಅಚ್ಚಮ್ಮ ತುಟಿಪಿಟಕ್ಕೆನ್ನದೆ ಕೇಳುತ್ತ ಕುಳಿತರು.

ರಾಮು, ಶ್ರೀನಿವಾಸಮೂರ್ತಿ ಬರಲು, ಸೀತಾ ಎದ್ದು ಹೋಗಿ ಅವರಿಗೆ ಕಾಫಿ ತಂದುಕೊಟ್ಟಳು.

ಸ್ವಲ್ಪ ಹೊತ್ತು ಭಾವನೊಂದಿಗೆ ಮಾತನಾಡುತ್ತ ಕುಳಿತಿದ್ದ ರಾಮು,

"ಮಾವನವರ ಮನೆಗೆ ಹೋಗುತ್ತೇನೆ ಭಾವ—ಬೆಳಿಗ್ಗೆ ಬರುತ್ತೇನೆ" ಎಂದ.

ಅಚ್ಚಮ್ಮನವರು ಮಧ್ಯೆ ಬಾಯಿ ಹಾಕಿ,

"ಇಲ್ಲೇ ಊಟಮಾಡಿಕೊಂಡು ಹೋಗಪ್ಪ" ಎಂದರು.

ಅಚ್ಚಮ್ಮನವರಿಗೆ ಬೇಸರಪಡಿಸಲಿಚ್ಛಿಸದೆ ರಾಮು ಅಲ್ಲಿಯೇ ನಿಂತ.

ರಾಮುಸ್ವಾಮಿಯ ಪ್ರಗತಿ ಕೇಳಿ ಹರ್ಷಿಸಿದ ಶ್ರೀನಿವಾಸಮೂರ್ತಿ,

"ಹಿಡಿದುದನ್ನು ಸಾಧಿಸುವ ಶಕ್ತಿ ನಿನ್ನಲ್ಲಿದೆ ರಾಮುಸ್ವಾಮಿ. ಯಾವದಕ್ಕೆ ಕೈಯಿಟ್ಟರೂ ನೀನು ನಿಷ್ಫಲನಾಗುವುದಿಲ್ಲ."

ಭಾವ-ಭಾವಮೈದುನರಿಗಿಂತಲೂ, ಹೆಚ್ಚಾಗಿ ಗೆಳೆಯರಾಗಿದ್ದ ಶ್ರೀನಿವಾಸ ಮೂರ್ತಿ, ರಾಮು ಬಹಳ ಹೊತ್ತು ಮಾತನಾಡುತ್ತ ಕುಳಿತರು.

ಎಂಟು ಗಂಟೆಗೆ ಅಚ್ಚಮ್ಮನವರೇ ಅವರನ್ನು ಊಟಕ್ಕೆ ಎಬ್ಬಿಸಿದರು.

ಇಬ್ಬರೂ ವಿನೋದವಾಗಿ ಹರಟುತ್ತ ಊಟಮಾಡುತ್ತಿದ್ದುದನ್ನು ನೋಡುತ್ತಿದ್ದ ಅಚ್ಚಮ್ಮನವರು,

"ಯಾವ ಅಣ್ಣತಮ್ಮಂದಿರೂ ಮೂರ್ತಿ, ರಾಮು ಹಾಗೆ ಇರಲು ಸಾಧ್ಯವಿಲ್ಲ ಕಮಲಾಕ್ಷಮ್ಮನವರೇ" ಎಂದರು.

"ಹೌದಮ್ಮ ಹೌದು-ದಿನಕ್ಕೆ ಹತ್ತು ಸಲವಾದರೂ ರಾಮು ಭಾವನನ್ನು ಸ್ಮರಿಸಿಕೊಳ್ಳುತ್ತಾನೆ."

ರಾಮುಸ್ವಾಮಿ ಊಟಮುಗಿಸಿ, ಸ್ವಲ್ಪ ಹೊತ್ತು ಮಾತನಾಡುತ್ತ ಕುಳಿತಿದ್ದು ಮಾವನ ಮನೆಗೆ ಹೊರಟ.

## ೩೩

ಮಾರನೆಯ ಬೆಳಗ್ಗೆ ರಾಮಸ್ವಾಮಿ, ತನ್ನ ಹೆಂಡತಿ ಅತ್ತೆಯೊಂದಿಗೆ ತಂಗಿಯ ಮನೆಗೆ ಬಂದ.

ರಾಜಮ್ಮನವರು ಬೀಗಿತ್ತಿಯನ್ನು ಮಾತನಾಡಿಸಿ, ಎಲ್ಲರನ್ನೂ ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿದರು.

ಅಚ್ಚಮ್ಮನವರು 'ಮಡಿ'ಯ ಕಾರಣಕ್ಕಾಗಿ ಬರಲು ಸಾಧ್ಯವಿರಲಿಲ್ಲ. ಉಳಿದವರು ಆಹ್ವಾನ ಅಂಗೀಕರಿಸಿದರು.

ರಾಮಸ್ವಾಮಿ, ಹೆಂಡತಿಯನ್ನೂ ಅತ್ತೆಯನ್ನೂ ಕಳಿಸಿಕೊಟ್ಟು ತಾನು ತಂಗಿಯ ಮನೆಯಲ್ಲೇ ಉಳಿದುಕೊಂಡ.

ಹನ್ನೆರಡು ಗಂಟೆಗೆ ರಾಜಮ್ಮನವರು ಆಳಿನ ಕೈಯಲ್ಲಿ ಹೇಳಿಕಳಿಸಿದರು.

ರಾಮಸ್ವಾಮಿ, ಸೀತಾ, ಕಮಲಾಕ್ಷಮ್ಮ, ಶ್ರೀನಿವಾಸಮೂರ್ತಿ ಅವರ ಮನೆಗೆ ಹೊರಟರು.

ಸೀತಾರಾಮಯ್ಯನವರು ಎಲ್ಲರನ್ನೂ ಸ್ವಾಗತಿಸಿದರು.

ಒಳಗೆ ಹೋದ ಕಮಲಾಕ್ಷಮ್ಮನವರು, ರತ್ನನನ್ನು ಕರೆದು,

" ಸಮಾಚಾರ ಕೇಳಿದೆಯಾ ರತ್ನಾ " ಎಂದರು.

" ಏನತ್ತೆ ಸಮಾಚಾರ ? "

" ಸೀತೂಗೆ ನಾಲ್ಕು ತಿಂಗಳು ತುಂಬಿದೆ ಕಣೇ."

" ನಿಜವೇನತ್ತೆ—ಅವಳನ್ನು ನೋಡಿದರೆ ಹಾಗೆ ಕಾಣುವುದಿಲ್ಲ."

" ಬೆಳವಳಿಗೆ ಸಾಲದು. ತುಂಬ ಇಳಿದು ಹೋಗಿದ್ದಾಳೆ."

" ಸೀತೂನ ನಮ್ಮ ಜತೆ ಕರೆದುಕೊಂಡು ಹೋಗೋಣ ಅತ್ತೆ."

" ಅಚ್ಚಮ್ಮನವರು ಒಪ್ಪಬೇಕಲ್ಲ ರತ್ನಾ."

" ಒಪ್ಪಿಸೋಣ—ಬೇಕಾದರೆ ನಮ್ಮಮ್ಮ ಒಂದು ಮಾತು ಹೇಳುತ್ತಾಳೆ."

" ಅವರು ಒಂದು ಥರಾ ರತ್ನಾ—ಏನಂದುಕೊಳ್ಳುತ್ತಾರೋ ? "

" ಏನೂ ಅಂದುಕೊಳ್ಳಲ್ಲ ಅತ್ತೆ. ಅಚ್ಚಮ್ಮನವರಿಗೆ ಈಗ ತೃಪ್ತಿ ಯಾಗಿದೆ."

" ಏಕೆ "

" ಪಾತ್ರೆ ಪಡಗ ತಂದುಕೊಟ್ಟರಲ್ಲಾ ! "

" ಗೋಪಾಳದ ಪಾತ್ರೆ ಪಡಗಕ್ಕಾಗಿ ಮನಃಕಷಾಯ ಮಾಡಿಕೊಳ್ಳ ಬೇಕೇ ? "

" ಎಲ್ಲರೂ ನಿಮ್ಮ ಹಾಗೆ ಇರುತ್ತಾರೆಯೇ ಅತ್ತೆ."

" ಸಾಕು ಸುಮ್ಮನಿರೇ—ನನ್ನ ಹೊಗಳಬೇಡ "

ಎಂದು ಹುಸಿಮುನಿಸಿನಿಂದ ಗದರಿಕೊಂಡರು.

ಎಲ್ಲರೂ ಊಟ ಮುಗಿಸಿ ಸಂಜೆಯವರೆಗೆ ಸೀತಾರಾಮಯ್ಯನವರ ಮನೆ ಯಲ್ಲಿಯೇ ಕಾಲ ಕಳೆದು ಮನೆಗೆ ಹಿಂದಿರುಗಿದರು.

ಮಾರನೆಯ ದಿನ ಅಚ್ಚಮ್ಮನವರು, ಸೀತಾರಾಮಯ್ಯನವರ ಮನೆಯವರ ನ್ನೆಲ್ಲಾ ಊಟಕ್ಕೆ ಕರೆದರು.

ಮಧ್ಯಾನ್ಹ ಎಲ್ಲರೂ ಊಟ ಮುಗಿಸಿದ ಮೇಲೆ ಅಚ್ಚಮ್ಮನವರು ಬಡಿಸಿ ಕೊಂಡು ಕುಳಿತುಕೊಂಡರು.

ಅವರ ಜತೆ ಮಾತನಾಡುತ್ತಾ ಕಮಲಾಕ್ಷಮ್ಮ, ರಾಜಮ್ಮ ಕುಳಿತು ಕೊಂಡರು.

ಹಪ್ಪಳ, ಸಂಡಿಗೆಯ ಮಾತಿನಿಂದ ಆರಂಭಿಸಿದ ರಾಜಮ್ಮನವರು,

" ಅಚ್ಚಮ್ಮನವರೇ—ಸೀತೂಗೆ ಎಷ್ಟು ತಿಂಗಳು ? " ಎಂದು ಕೇಳಿದರು.

" ಐದನೆಯ ತಿಂಗಳು—"

" ಹೆರಿಗೆ, ಬಾಣಂತನ ಎಲ್ಲಿ ? "

" ಇಲ್ಲೇ ಆಗತ್ತೆ."

" ಚೊಚ್ಚಲ ಬಾಣಂತನ ತೌರುಮನೆಯಲ್ಲಿ ಆಗುವುದು ಒಳ್ಳೆಯ ದಲ್ಲವೇ ? "

" ನಾನು ನನ್ನ ಸೊಸೆಗೆ ಯಾವದಕ್ಕೂ ಕಡಿಮೆ ಮಾಡುವುದಿಲ್ರೀ ! "

" ಕಡಿಮೆ ಮಾಡುವ ಮಾತಿಗಲ್ಲ ಅಚ್ಚಮ್ಮನವರೇ—ಈ ಸಮಯದಲ್ಲಿ ತುಂಬಿದ ಜೀವ ತಾಯಿಯನ್ನು ಬಯಸುವುದು ಸ್ವಾಭಾವಿಕ."

" ಕಮಲಾಕ್ಷಮ್ಮನವರು ಕರೆದುಕೊಂಡು ಹೋಗುವಹಾಗಿದ್ದರೆ ನನ್ನ ದೇನೂ ಅಭ್ಯಂತರವಿಲ್ಲಮ್ಮಾ."

ಕಮಲಾಕ್ಷಮ್ಮ ಸಂತೋಷಿಸುತ್ತಾ,

" ರತ್ನನೂ ಅಲ್ಲೇ ಇರುತ್ತಾಳೆ. ಅವಳೂ ನೋಡಿಕೊಳ್ಳುತ್ತಾಳೆ."

" ನೀವು ಎಂದು ಹೊರಡಬೇಕು ಕಮಲಾಕ್ಷಮ್ಮ."

" ನಾಳೆ ಹೊರಡಲೇ ಬೇಕಮ್ಮ. ರಾಮೂಗೆ ರಜಾ ಇಲ್ಲ.—ಸೀತೂಗೆ ದಿನ ತುಂಬುವ ಹೊತ್ತಿಗೆ ಕಾಗದ ಬರೆಯುತ್ತೇನೆ. ನೀವು ಬರಬೇಕು ಅಚ್ಚಮ್ಮ ನವರೇ."

" ಖಂಡಿತ ಬರುತ್ತೇನಮ್ಮ" ಎಂದರು.

ಮಾರನೆಯ ಬೆಳಿಗ್ಗೆ ತಾಯಿಯೊಂದಿಗೆ ಹೊರಡಲು ಸೀತಾ ಸಿದ್ಧತೆ ಮಾಡಿಕೊಳ್ಳಲಾರಂಭಿಸಿದಳು.

ರಾಮಸ್ವಾಮಿ ಭಾವನೊಂದಿಗೆ ಮಾತನಾಡುತ್ತಾ,

" ನೀನು ಒಂದು ಉಪಕಾರ ಮಾಡಬೇಕು ಮೂರ್ತಿ" ಎಂದ.

" ಏನದು ರಾಮು ?"

" ಪ್ರತಿ ಶನಿವಾರ ಸ್ಕೂಲ್ ಮುಗಿಸಿಕೊಂಡು ನೀನು ಬೆಂಗಳೂರಿಗೆ ಬರಬೇಕು. ಸೋಮವಾರ ಬೆಳಿಗ್ಗೆ ನಿನ್ನನ್ನು ಕಳಿಸಿಕೊಡುತ್ತೇನೆ."

" ಪ್ರತಿ ಶನಿವಾರ ಬರುವುದಕ್ಕೆ ಆಗುತ್ತದೋ ಇಲ್ಲವೋ–ತಿಂಗಳಿಗೊಮ್ಮೆ ಯಾದರೂ ಬರುತ್ತೇನೆ."

" ನನಗೆ ಇರುವವಳು ಒಬ್ಬಳೇ ತಂಗಿ–ಸೀತೂ—ಇದು ಅವಳ ಚೊಚ್ಚಿಲ ಬಾಣಂತನ !"

" ನಿಮ್ಮ ತಾಯಿಯವರು ಇರುವಾಗ ಭಯವೇನು ರಾಮು ?"

" ಹೆಣ್ಣುಮಕ್ಕಳ ವಿಷಯ ಬಹಳ ಕಷ್ಟಪ್ಪ !"

" ಜೋಗ್ ಬಿಟ್ಟು ಬಂದ ಮೇಲೆ ನಿನ್ನ ಪರಿಸ್ಥಿತಿ ಸುಧಾರಿಸಿದೆ ಎಂದು ಕೇಳಿದೆ ರಾಮು—ಸಂತೋಷ."

" ನನಗೆ ಒಳ್ಳೆಯ ಧಣಿಗಳು ಸಿಕ್ಕಿದ್ದಾರೆ. ನಮ್ಮ ಕೆಲಸ ಗೌರವಿಸುತ್ತಾರೆ."

" ಈಚೆಗೆ ನಿನ್ನ ಅಣ್ಣನವರ ಸುದ್ದಿ ಸಮಾಚಾರ ತಿಳಿಯಲಿಲ್ಲ."

" ತರೀಕೆರೆಯಲ್ಲಿದ್ದಾನೆ."

" ಬೆಂಗಳೂರಿಗೆ ಬರಲಿಲ್ಲವೇ ? "

" ಆಗಾಗ್ಗೆ ಬರುತ್ತಿರುತ್ತಾನೆ."

" ನೀನು ನಾಳೆ ಹೊರಡಲೇ ಬೇಕು."

" ಹೌದು ಮೂರ್ತಿ—ಒಂದು ವಾರ ರಜಾ ತೆಗೆದುಕೊಂಡಿದ್ದೆ—ಅದೂ ಮುಗಿಯುತ್ತ ಬಂದಿದೆ."

ಸೀತಾ ಅಲ್ಲಿಗೆ ಬರಲು, ರಾಮುಸ್ವಾಮಿ ಎದ್ದು ಹೊರಗೆ ಹೋದ.

ಸೀತಾ, ಮೂರ್ತಿಯ ಕಾಲುಗಳಿಗೆ ನಮಸ್ಕರಿಸಿದಳು.

ಅವಳು ಕಂಬನಿಗರೆಯುತ್ತಿದ್ದುದನ್ನು ಕಂಡ ಮೂರ್ತಿ,

" ಅಳುವುದೇಕೆ—ಸಂತೋಷವಾಗಿ ಹೋಗಿಬಾ."

" ನೀವು ಯಾವಾಗ ಬರುತ್ತೀರಿ ? "

" ಬೇಗ ಬರುತ್ತೇನೆ. ಪ್ರತಿ ವಾರವೂ ಬರಬೇಕೆಂದು ರಾಮು ಹೇಳಿದ್ದಾನೆ."

" ಬರುತ್ತೀರಲ್ಲವೇ ? "

" ಪ್ರಯತ್ನಿಸುತ್ತೇನೆ. ಸ್ಕೂಲಿನ ಜವಾಬ್ದಾರಿಯೆಲ್ಲಾ ನನ್ನದಾಗಿದೆ."

" ಅತ್ತೆಮ್ಮನವರನ್ನೂ ಕರೆದುಕೊಂಡು ಬನ್ನಿ."

" ತನ್ನ ಮೊಮ್ಮಗನನ್ನು ಎತ್ತಿಕೊಳ್ಳಲು ಅವಳೇ ಕುಣಿಯುತ್ತ ಬರುತ್ತಾಳೆ."

ರಾಮುಸ್ವಾಮಿ ಹೊರಗಿನಿಂದ,

" ಹೊರಡೋಣವೇ ಸೀತೂ " ಎಂದ.

ಸೀತಾ ಹೊರಗೆ ಬರಲು ಎಲ್ಲರೂ ಸ್ಟೇರ್ಷ ವ್ಯಾಗ್ಗ ಬಳಿ ಹೋದರು.

೩೪

ತಾಯಿ, ತಂಗಿ, ಹೆಂಡತಿಯೊಂದಿಗೆ ಊರಿಗೆ ಹಿಂದಿರುಗಿದ ರಾಮಸ್ವಾಮಿ, ಅವರನ್ನು ಮನೆಯಲ್ಲಿ ಬಿಟ್ಟು, ತಾನು ಕೂಡಲೆ ಶಾಮಸುಂದರ್ ಅವರನ್ನು ಕಾಣಲು ಆಫೀಸಿಗೆ ಹೋದ.

ನಗೆಮೊಗದಿಂದ ರಾಮಸ್ವಾಮಿಯನ್ನು ಸ್ವಾಗತಿಸಿದ ಶಾಮಸುಂದರ್,

" ಬನ್ನಿ—ಮಿ|| ರಾಮಸ್ವಾಮಿ. ನಿಮ್ಮ ವೆಕೇಷನ್ (Vaccation) ಹೇಗಾಯಿತು ? " ಎಂದು ಕೇಳಿದರು.

" ಆನೇಕಲ್ಲಿಗೆ ಹೋಗಿ ನನ್ನ ತಂಗಿಯನ್ನು ಕರೆದುಕೊಂಡು ಬಂದೆ ಸರ್."

" ನಿಮ್ಮ ಭಾವನವರು ಏನು ಮಾಡುತ್ತಿದ್ದಾರೆ."

" ಹೈಸ್ಕೂಲ್ ಹೆಡ್‌ಮಾಸ್ಟರಾಗಿದ್ದಾರೆ."

" ಇಲ್ಲಿ ನೋಡಿ "

ಎಂದು ಒಂದು ಬ್ಲೂ ಪ್ರಿಂಟನ್ನು (Blue-print) ಮೇಜಿನ ಮೇಲೆ ಹರಹಿ,

" ಎಚ್. ಎಂ. ಟಿ. ಯವರಿಗೆ (H. M. T.) ಒಂದು ಕ್ಲಬ್ ಹೌಸ್ (Club-house) ಕಟ್ಟಿಕೊಡಬೇಕಾಗಿದೆ. ಇದು ಕ್ಲಬ್ ಹೌಸೂ ಆಗಿರಬೇಕು–ನಾಟಕ ಮಂದಿರವೂ ಆಗಿರಬೇಕು. ಪಿಂಗ್‌ಪಾಂಗ್, ಬಿಲಿಯರ್ಡ್ಸ್, ಕಾರ್ಡ್ಸ್ ರೂಮುಗಳು, ಪುಸ್ತಕ ಭಂಡಾರ ಮತ್ತು ವಾಚನಾಲಯ, ಲೇಡೀಸ್ ಹಾಲ್, ಕ್ಯಾಂಟೀನ್, ಥಿಯೇಟರ್ ಇವಿಷ್ಟೂ ಒಂದೇ ಕಟ್ಟಡದಲ್ಲಿ ಅಡಕವಾಗಬೇಕು."

ಪ್ಲ್ಯಾನನ್ನು (Plan) ಪರೀಕ್ಷಿಸುತ್ತಾ ರಾಮಸ್ವಾಮಿ,

"ಈ ಪ್ಲ್ಯಾನ್ ಯಾರದು ಸರ್" ಎಂದು ಕೇಳಿದ.

"ಎಚ್. ಎಂ. ಟಿ. ಯವರೇ ಮಾಡಿಸಿ ಕಳಿಸಿದ್ದಾರೆ—ಹೇಗಿದೆ ?"

"ತುಂಬ ಗುಜಗುಂಪಲಾಗಿದೆ."

"ನನಗೂ ಹಾಗೆ ಅನಿಸುತ್ತಿದೆ."

"ಎಸ್ಟಿಮೇಟ್ ಎಷ್ಟು ?"

"ಎರಡೂವರೆ ಲಕ್ಷ."

"ಇನ್ನು ಐವತ್ತು ಸಾವಿರ ಹೆಚ್ಚಾದರೆ ಚಿಂತೆಯಿಲ್ಲವೇ ?"

"ನೀವು ಪ್ಲಾನ್ ಕೊಡಿ. ಮ್ಯಾನೇಜಿಂಗ್ ಡೈರೆಕ್ಟರೊಂದಿಗೆ ಮಾತನಾಡುತ್ತೇನೆ."

ಒಂದು ಹಳೇ ಕಾಗದ, ಪೆನ್ಸಿಲ್ ಕೈಗೆತ್ತಿಕೊಂಡ ರಾಮಸ್ವಾಮಿ, ಸ್ಥೂಲವಾಗಿ ಪ್ಲಾನ್ ಬರೆದು,

"ಈ ಕಟ್ಟಡಕ್ಕೆ ಎರಡು ಫ್ರಂಟ್ (Front) ಇರಬೇಕು ಸರ್. ಪೂರ್ವಕ್ಕಿರುವ ಆಟದ ಬಯಲಿಗೆ ಎದುರಿಗೆ ಕ್ಲಬ್ ಹೌಸ್; ಉತ್ತರಕ್ಕಿರುವ ರಸ್ತೆಯ ಎದುರಿಗೆ ಥಿಯೇಟರ್. ಕ್ಲಬ್ ಹೌಸಿನ ಕೆಳಭಾಗದಲ್ಲಿ ಪಿಂಗ್‌ಪಾಂಗ್, ಬಿಲಿಯರ್ಡ್ಸ್, ಕಾರ್ಡ ಟೇಬಲ್ಲುಗಳಿಗೆ ರೂಮುಗಳು, ಮಹಡಿಯ ಮೇಲೆ ಲೈಬ್ರರಿ, ರೀಡಿಂಗ್ ರೂಮ್, ಲೇಡೀಸ್ ರೂಮ್–ಕ್ಲಬ್ಬಿಗೂ ಥಿಯೇಟರಿಗೂ ಒಂದು ಕಾರಿಡಾರ್ (Corridor) ಕೊಡುತ್ತೇನೆ — ಸುಮಾರು ೧೫ ಅಡಿ. ಇದರಿಂದ ಥಿಯೇಟರಿಗೆ ನಾಲ್ಕು ಕಡೆಗಳಿಂದಲೂ ಗಾಳಿ ಬೆಳಕು ಬರಲು ಅನುಕೂಲವಾಗುತ್ತದೆ."

ಅವನ ಪ್ಲ್ಯಾನನ್ನು ಕುತೂಹಲದಿಂದ ಈಕ್ಷಿಸಿದ ಶಾಮಸುಂದರ್ ಅವರು,

"ಬ್ಲೂ ಪ್ರಿಂಟ್ (Blue-print) ಯಾವಾಗ ಕೊಡಬಲ್ಲಿರಿ ಮಿ|| ರಾಮಸ್ವಾಮಿ."

"ಇನ್ನು ನಾಲ್ಕು ದಿವಸಗಳಲ್ಲಿ ಸಿದ್ಧಮಾಡುತ್ತೇನೆ."

"ಬ್ಲೂ ಪ್ರಿಂಟ್ ರೆಡಿಯಾದ ಕೂಡಲೇ ತಿಳಿಸಿ — ಮ್ಯಾನೇಜಿಂಗ್ ಡೈರೆಕ್ಟರ್ ಬಳಿಗೆ ನಿಮ್ಮನ್ನೇ ಕರೆದುಕೊಂಡು ಹೋಗುತ್ತೇನೆ. ಅವರಿಗೆ ನಿಮ್ಮ ಪ್ಲ್ಯಾನ್ ವಿವರಿಸಿ, ಅವರ ಒಪ್ಪಿಗೆ ದೊರಕಿಸುವುದು ನಿಮ್ಮ ಭಾರ."

"ಆಗಲಿ ಸರ್."

ಕಟ್ಟಡದ ಫುಲ್ ಸೂಪರ್‌ವಿಷನ್ (Full Supervision) ನಿಮ್ಮದು ! ”

“ .................................................. ”

“ ಒಪ್ಪಿಕೊಳ್ಳುವಿರಾ ? ”

“ ಆಫೀಸಿನಲ್ಲಿ ನನಗಿಂತ ಸೀನಿಯರ್ಸ್ (Seniors) ಇದ್ದಾರೆ.”

“ ಇರಲಿ—ಅವರಿಗೂ ಕೆಲಸವಿದೆ.”

“ ಅವರಿಗೆ ಅಸಮಾಧಾನವಾಗುವುದಿಲ್ಲವೇ ? ”

“ ಏಕಾಗಬೇಕು ? ಎಲ್ಲರ ಟ್ಯಾಲೆಂಟಿನ (Talent) ಪೂರ್ಣ ಉಪಯೋಗ ವಾಗಬೇಕು.”

“ ಥ್ಯಾಂಕ್ ಯು ಸರ್ (Thank You, Sir) ”

ಎಂದು ಅವರ ಅಪ್ಪಣೆಪಡೆದು ಹೊರಟ.

ನಾಲ್ಕು ದಿನ ರಾಮುಸ್ವಾಮಿ, ತದೇಕಚಿತ್ತನಾಗಿ ಕುಳಿತು ‘ಬ್ಲೂ ಪ್ರಿಂಟ್’ ಸಿದ್ಧಗೊಳಿಸಿದ.

ಎಚ್. ಎಂ. ಟಿ.ಯ ಮ್ಯಾನೇಜಿಂಗ್ ಡೈರೆಕ್ಟರ್ ಅವರಿಗೆ ಫೋನ್ ಮಾಡಿ ಶಾಮುಸುಂದರ್, ರಾಮುಸ್ವಾಮಿಯೊಂದಿಗೆ ಹೊರಟರು.

ಶಿಲಾಶಿಲ್ಪದಂತೆ ಕುಳಿತು ರಾಮುಸ್ವಾಮಿಯ ವಿವರಣೆ ಕೇಳಿದ ಮ್ಯಾನೇಜಿಂಗ್ ಡೈರೆಕ್ಟರು, ಮಾತನಾಡದೆ, ಶಾಮುಸುಂದರ್ ಅವರನ್ನು ಕರೆದು ಕೊಂಡು ಪಕ್ಕದ ರೂಮಿಗೆ ಹೋದರು.

ರಾಮುಸ್ವಾಮಿಯ ಎದೆ ಡವಗುಟ್ಟಲಾರಂಭಿಸಿತು.

‘ ಮ್ಯಾನೇಜಿಂಗ್ ಡೈರೆಕ್ಟರಿಗೆ ನನ್ನ ಸುಧಾರಣೆ ಒಪ್ಪಿಗೆಯಾಗಲಿಲ್ಲವೋ ಏನೋ—’ ಎಂದುಕೊಂಡ.

ಬ್ಲೂ ಪ್ರಿಂಟನ್ನು ಮುಂದೆ ಹರಹಿಕೊಂಡ ಮ್ಯಾನೇಜಿಂಗ್ ಡೈರೆಕ್ಟರ್ ಅವರು,

“ ಈ ಪ್ಲ್ಯಾನ್ ಸಿದ್ಧಗೊಳಿಸಿದವರು ಯಾರು ಮಿ|| ಶಾಮು ಸುಂದರ್.”

“ ಈಗ ನಿಮಗೆ ವಿವರಿಸಿದ ಮಿ|| ರಾಮುಸ್ವಾಮಿ ಅವರು.”

" ಇವರು ನಿಮ್ಮ ಕಂಪೆನಿಯ ಇಂಜನಿಯರೇ ? "

" ಹೌದು."

" ನಮ್ಮ ಕಟ್ಟಡದ ಸೂಪರ್‌ವಿಷನ್ ಮಾಡುವವರು ಯಾರು ? "

" ಮಿ|| ರಾಮಸ್ವಾಮಿ,"

" ನಿಮ್ಮ ಇಂಜನಿಯರ್ ಇನ್ನೂ ಚಿಕ್ಕ ಹುಡುಗ—ಇಂಥ ದೊಡ್ಡ ಕೆಲಸ ನಿಭಾಯಿಸಬಲ್ಲನೇ ? "

" ರಾಮಸ್ವಾಮಿ ವಯಸ್ಸಿನಲ್ಲಿ ಚಿಕ್ಕವರಾದರೂ ಬುದ್ಧಿವಂತರು. ನಿಮ್ಮ ಕಟ್ಟಡದ ಜವಾಬ್ದಾರಿ ನನ್ನದು. ಅದರಲ್ಲಿ ಏನಾದರೂ ನ್ಯೂನಾತಿರೇಕಗಳು ಬಂದಲ್ಲಿ ಅವಕ್ಕೆ ನಾನು ಜವಾಬ್ದಾರ.—ಮಿ|| ರಾಮಸ್ವಾಮಿ ಸೂಚಿಸಿರುವ ಸುಧಾರಣೆಗಳ ಬಗ್ಗೆ ತಮ್ಮ ಅಭಿಪ್ರಾಯವೇನು ? "

" It is brilliant ! "

" ಎಸ್ಟಿಮೇಟ್ ಹೆಚ್ಚುತ್ತದೆ."

" ನೀವು ಪೇಪರ್ಸ್ ಕಳಿಸಿಕೊಡಿ—ನಾನು ರುಜುಮಾಡಿ ಕಳಿಸುತ್ತೇನೆ. ನಮ್ಮ ಕಟ್ಟಡ ಯಾವಾಗ ಮುಗಿಸಬಲ್ಲಿರಿ ? "

" ಆರು ತಿಂಗಳಲ್ಲಿ ! "

" ಒಳ್ಳೆಯದು "

ಎಂದು ಹೊರಗೆ ಬಂದ ಮ್ಯಾನೇಜಿಂಗ್ ಡೈರೆಕ್ಟರು, ರಾಮಸ್ವಾಮಿಗೆ ಹಸ್ತಲಾಘವವಿತ್ತು,

" ನಿಮ್ಮ ಸುಧಾರಣೆಗಳು ನನ್ನ ಮನಸ್ಸಿಗೆ ಬಂದಿವೆ ಮಿ|| ರಾಮಸ್ವಾಮಿ. ಪ್ಲ್ಯಾನ್ ನಾನು ಒಪ್ಪಿಕೊಂಡಿದ್ದೇನೆ. ಆದಷ್ಟು ಬೇಗ ಕೆಲಸ ಆರಂಭಿಸಿ. ಈ ಕಟ್ಟಡ ನಿಮ್ಮ ಭವಿಷ್ಯಕ್ಕೆ ಭದ್ರವಾದ ಬುನಾದಿ ಹಾಕಲಿ. ನಿಮಗೆ ಒಳ್ಳೆಯ ಧಣಿಗಳು ಲಭಿಸಿದ್ದಾರೆ—ಶಾಮಸುಂದರ್ ಅವರಿಗೆ ನಿಮ್ಮ ಬಗ್ಗೆ ಅಪಾರ ಪ್ರೇಮ, ಗೌರವ ಇದೆ—ಆದನ್ನು ಉಳಿಸಿಕೊಳ್ಳಿ."

" ನಿಮ್ಮ ಹಿತೋಕ್ತಿಗಳಿಗೆ ನಾನು ಋಣಿಯಾಗಿದ್ದೇನೆ ಸರ್. ಶ್ರೀ ಶಾಮಸುಂದರ್ ಅವರು ನನ್ನಲ್ಲಿ ಪುತ್ರವಾತ್ಸಲ್ಯವಿಟ್ಟು ಕಾಪಾಡುತ್ತಿದ್ದಾರೆ. ನಾನು ಅವರಿಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದಾಗಿದೆ " ಎಂದ.

ಇಬ್ಬರೂ ಎಚ್. ಎಂ. ಟಿ. ಯಿಂದ ಹಿಂದಿರುಗುವಾಗ ಶಾಮಸುಂದರ್ ಅವರು,

" ಕೆಲಸ ಬೇಗ ಆರಂಭಿಸಿ ಮಿ|| ರಾಮಸ್ವಾಮಿ. ಸ್ಟಾಫ್‌ನಲ್ಲಿ (Staff) ನಿಮಗೆ ಯಾರು ಬೇಕೋ ತೆಗೆದುಕೊಳ್ಳಿ."

" ನಮ್ಮ ಮೇಸ್ತ್ರಿ ಮುನಿಸ್ವಾಮಪ್ಪನವರನ್ನು ಜತೆಗೆ ಕೊಡಿ ಸರ್— ಸಾಕು "

ಎಂದು ರಾಮಸ್ವಾಮಿ ಉತ್ತರಿಸಿದ.

# ೩೫

ತೌರುಮನೆ ಸೇರಿದ ಒಂದೇ ತಿಂಗಳಲ್ಲಿ ಸೀತಾ ಪುಟವಿಟ್ಟ ಚಿನ್ನದಂತಾ ದಳು. ತಾಯಿಯ ಆರೈಕೆ, ರತ್ನನ ಮಮತೆ, ಅಣ್ಣನ ಅವ್ಯಾಜ ಅಂತಃಕರಣ ಅವಳ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಿದ್ದವು.

ಶ್ರೀನಿವಾಸಮೂರ್ತಿ ಎರಡು ಬಾರಿ ಬೆಂಗಳೂರಿಗೆ ಬಂದುಹೋಗಿದ್ದ. ಸೀತೆಯ ಮನಃಶಾಂತಿಗೆ ಅದೂ ಕಾರಣವಾಗಿತ್ತು.

ಒಡಹುಟ್ಟಿದ ಸೋದರಿಯಂತೆ ರತ್ನಾ ತನ್ನ ಸೇವೆ ಮಾಡುತ್ತಿದ್ದುದನ್ನು ಕಂಡು ಮನಕರಗಿದ ಸೀತಾ,

" ರತ್ನಾ, ನಾನು ನಿನ್ನ ಸೇವೆ ಮಾಡುವುದು ಯಾವಾಗ ? "

" ಅದು ಯಾವದನ್ನೂ ನೀನು ಯೋಚಿಸಬಾರದು ಸೀತಾ—"

" ನನ್ನ ಅಣ್ಣನ ಮಗನನ್ನೆತ್ತಿಕೊಳ್ಳಲು ನನಗೆ ಆಸೆಯಿಲ್ಲವೇ ಅತ್ತಿಗೆ."

" ನನಗೂ ಆಸೆಯಿದೆ ಸೀತಾ...."

" ರತ್ನಾ, ಅಣ್ಣ ದುಡಿಯುವುದು ನೋಡಿದರೆ ನನ್ನ ಕರುಳು ಕಿತ್ತು ಬರುತ್ತದೆ. ಬೆಳಿಗ್ಗೆಯಿಂದ ಬಿಸಿಲಲ್ಲಿ ಬೆಂದು, ಅವನು ಆಯಾಸಗೊಂಡು ಮನೆಗೆ ಬರುತ್ತಾನೆ. ನಿನ್ನನ್ನು ನೋಡಿದ ಅರೆಕ್ಷಣದಲ್ಲಿ ಅವನ ಆಯಾಸ ಪರಿಹಾರವಾಗುತ್ತದೆ. ನನ್ನ ಅಣ್ಣನ ಬಾಳಿಗೆ ತನಿಯೆರೆಯುತ್ತಿರುವ ನೀನು ನನ್ನ ತೌರುಮನೆಯ ಮಂಗಳಲಕ್ಷ್ಮಿ."

" ಅತ್ತೆ ಒಬ್ಬರೇ ಹುಚ್ಚರು ಎಂದಿದ್ದೆ—ನೀನು ಎಷ್ಟಾದರೂ ಅವರ ಮಗಳಲ್ಲವೇ ?—ಅದಿರಲಿ, ನಿನ್ನ ಮಗನಿಗೆ ಏನು ಹೆಸರಿಡುತ್ತೀ ಸೀತಾ ? "

" ಹೇಳಲೀ ? "

" ಹೇಳು "

" ನೀನು ನನ್ನನ್ನು ಬಯ್ಯಕೂಡದು."

" ಇಲ್ಲ—ಹೇಳು "

" ರತ್ನಾಕರ "

" ನಿಮ್ಮತ್ತೆ ಸುಮ್ಮನಿರುವರೇ ? "

" ಈ ಒಂದು ವಿಷಯದಲ್ಲಿ ನಾನು ಅವರ ಮಾತು ಮೀರಲು ಸಿದ್ಧಳಾಗಿದ್ದೇನೆ."

ಕಮಲಾಕ್ಷಮ್ಮನವರು ಅಲ್ಲಿಗೆ ಬರಲು ರತ್ನಾ,

" ನಿಮ್ಮ ಮಗಳಿಗೆ ಸ್ವಲ್ಪ ಬುದ್ಧಿ ಹೇಳಿ ಅತ್ತೆ " ಎಂದಳು.

" ಯಾಕೆ ರತ್ನಾ."

" ಸೀತೂ ಅವರತ್ತೆ ಕೈಯಲ್ಲಿ ವ್ಯಾಜ್ಯ ಕಾಯ್ತಾಳಂತೆ ! "

" ಹೌದೇನೇ ಸೀತಾ ? "

" ಇಲ್ಲಮ್ಮ—ಅತ್ತಿಗೆ ನಿನ್ನ ರೇಗಿಸುತ್ತಿದ್ದಾಳೆ."

" ಸುಳ್ಳು ಅತ್ತೆ—ನಮ್ಮತ್ತೆ ಕೈಯಲ್ಲಿ ವ್ಯಾಜ್ಯಕಾಯುತ್ತೇನೆ ಎಂದು ಇದೇ ಈಗ ಹೇಳಿದಳು."

" ಏತಕ್ಕಂತೆ ? "

" ಮಗನಿಗೆ ' ರತ್ನಾಕರ ' ಎಂದು ಹೆಸರಿಡುತ್ತೇನೆಂದಳು — ನಿಮ್ಮತ್ತೆ ಸುಮ್ಮನಿರುತ್ತಾರೆಯೇ ಸೀತಾ ಎಂದೆ—ಈ ಒಂದು ವಿಷಯದಲ್ಲಿ ಅವರ ಮಾತು ಮೀರಲು ನಾನು ಸಿದ್ಧಳಾಗಿದ್ದೇನೆ ಎಂದಳು."

ಕಮಲಾಕ್ಷಮ್ಮ ನಗುತ್ತಾ,

" ಇಷ್ಟೇತಾನೆ—ಇನ್ನೇನೋ ಎಂದಿದ್ದೆ."

" ಸೀತೂಗೆ ಬುದ್ಧಿ ಹೇಳಿ ಅತ್ತೆ."

" ಏನೆಂದು ? "

" ಮಗನಿಗೆ ' ರತ್ನಾಕರ ' ಎಂದು ಹೆಸರಿಡಬೇಡವೆಂದು."

" ಇನ್ನೇನಿಡಬೇಕು ? "

" ಏನಾದರೂ ಇಡಲಿ — ಅವಳ ಯಜಮಾನರನ್ನು ಕೇಳಲಿ, ಅವರು ಹೇಳುತ್ತಾರೆ."

" ರತ್ನಾಕರ ಎನ್ನುವ ಹೆಸರು ನನಗೂ ಇಷ್ಟ ಕಣೇ ರತ್ನಾ "

" ಹೋಗಿ ಅತ್ತೆ—ನೀವೂ ಸೀತೂನ ಕಡೆಯೇ ಸೇರಿಕೊಂಡು ಬಿಟ್ಟರಿ."

" ಅಣ್ಣಯ್ಯ ನಿನ್ನಕಡೆ ಸೇರಿಕೊಳ್ಳುತ್ತಾನೆ ಸುಮ್ಮನಿರು ರತ್ನಾ "

ಎಂದು ಸೀತಾ ನಕ್ಕಳು.

ಹೆಂಡತಿ, ತಂಗಿಯು ಸರಸ, ಪರಿಹಾಸ ನೋಡುತ್ತಿದ್ದ ರಾಮಸ್ವಾಮಿ ಆನಂದಪರವಶನಾಗುತ್ತಿದ್ದ.

ಒಂದು ದಿನ ಸೀತಾ, ಅಣ್ಣ ಅತ್ತಿಗೆಯೊಂದಿಗೆ ಮಾತನಾಡುತ್ತ ಕುಳಿತಿದ್ದಾಗ,

" ಅಣ್ಣಾ........" ಎಂದಳು.

" ಏನಮ್ಮ? "

" ನನ್ನದೊಂದು ಕರಾರಿದೆ—ನೀನು ಹೂ ಅನ್ನಬೇಕು."

" ಏನದು—ಹೇಳು."

" ನೀನು ಮೊದಲು ' ಹೂ ' ಅನ್ನು."

" ಹೂ..............."

" ಅತ್ತಿಗೆಗೆ ಹೆಣ್ಣು ಹುಟ್ಟಿದರೆ ನನ್ನ ಮಗನಿಗೇ ಕೊಟ್ಟು ಮದುವೆ ಮಾಡಬೇಕು."

" ಕೂಸು ಹುಟ್ಟುವುದಕ್ಕೆ ಮುಂಚೆ ಕುಲಾವಿ ಹೊಲಿಸಿದರು ಎನ್ನುವುದು ಇದಕ್ಕೇ ಸೀತಾ."

" ಹೋಗಣ್ಣ—ನೀನೂ ನನ್ನ ಹಾಸ್ಯಮಾಡುತ್ತೀ ! "

" ರತ್ನನಿಗೂ ಗಂಡು ಹುಟ್ಟಿದರೆ ಏನು ಮಾಡುವುದು ಸೀತಾ ? "

" ನನ್ನ ಮಗ—ನಿನ್ನ ಮಗ ಇಬ್ಬರಿಗೂ ಒಂದೇ ಮನೆಯಿಂದ ಅಕ್ಕ ತಂಗಿಯರನ್ನು ತಂದು ಮದುವೆಮಾಡುವುದು."

" ಯಾರು ಬೇಡವೆಂದರು. ಅಗತ್ಯವಾಗಿ ಆಗಬಹುದು "

ಎಂದು ನಸುನಕ್ಕ.

ಅದೇ ರಾತ್ರಿ ಹಾಲಿನ ಗ್ಲಾಸು ಹಿಡಿದು ರೂಮಿನೊಳಗೆ ಬಂದ ರತ್ನನ ಕೈಯಿಂದ ಗ್ಲಾಸು ತೆಗೆದುಕೊಂಡ ರಾಮಸ್ವಾಮಿ, ಅವಳ ಬಾಯಿಗೆ ಹಿಡಿದ.

" ಇದೇನು ನನಗೆ ಕುಡಿಸುತ್ತಿರುವಿರಿ—ನೀವು ಕುಡಿದುಕೊಡಿ."

" ಇಲ್ಲ—ನೀನೇ ಕುಡಿಯಬೇಕು."

" ಏಕೋ ಕಾಣೆ."

" ಸೀತಾ ಹೇಳಿದ್ದು ಕೇಳಲಿಲ್ಲವೇ ? "

ರತ್ನಾ ನಾಚಿ ತಲೆತಗ್ಗಿಸಿದಳು.

ಪ್ರಿಯಸತಿಯ ಗಲ್ಲ ಹಿಡಿದು ಮೇಲಕ್ಕೆತ್ತಿದ ರಾಮಸ್ವಾಮಿ,

" ರತ್ನಾ—ನಾವು ಸೀತೆಯನ್ನು ನಿರಾಶೆಗೊಳಿಸಬಾರದು "

ರತ್ನಾ ಕತ್ತೆತ್ತಿ ಪತಿಯನ್ನೊಮ್ಮೆ ಕಣ್ತುಂಬ ನೋಡಿ,

" ನಿಮ್ಮನ್ನೂ ನಾನು ನಿರಾಶೆಗೊಳಿಸುವುದಿಲ್ಲ ಸ್ವಾಮಿ " ಎಂದಳು.

## ೩೬

ಎಚ್. ಎಂ. ಟಿ. ಕ್ಲಬ್ಬಿನ ಕಟ್ಟಡದ ಕೆಲಸ ಹುರುಪಿನಿಂದ ಸಾಗಿತ್ತು.

ಕಟ್ಟಡದ ಪ್ರಗತಿ ಶಾಮಸುಂದರ್ ಅವರಿಗೆ ತೃಪ್ತಿ, ಸಂತೋಷಗಳನ್ನುಂಟು ಮಾಡಿತ್ತು.

ಒಂದು ದಿನ ತನ್ನ ಕೆಲಸ ಮುಗಿಸಿಕೊಂಡು ಮನೆಗೆ ಹಿಂದಿರುಗಿದ ರಾಮಸ್ವಾಮಿ,

" ಅಮ್ಮಾ..........." ಎಂದು ಕೂಗಿದ.

ಕಮಲಾಕ್ಷಮ್ಮ ಬಂದು,

" ಏನಪ್ಪಾ " ಎಂದರು

" ಸುದ್ದಿ ಕೇಳಿದೆಯಾ ? "

" ಏನು ಸುದ್ದಿ ? "

" ಸುಬ್ಬೂಗೆ ಚಿತ್ರದುರ್ಗಕ್ಕೆ ವರ್ಗವಾಗಿದೆ."

" ನಿನಗೆ ಹೇಗೆ ಗೊತ್ತಾಯಿತು ? "

" ಪೇಪರಿನಲ್ಲಿ ಬಂದಿದೆ."

ಕಮಲಾಕ್ಷಮ್ಮ ನಿಟ್ಟುಸಿರುಬಿಟ್ಟು,

" ನನ್ನ ಮಗನ ಸಮಾಚಾರ ನಾನು ಪೇಪರಿನಲ್ಲಿ ಓದಿ ತಿಳಿದುಕೊಳ್ಳ ಬೇಕಾಗಿದೆ " ಎಂದರು.

' ತಾಯಿಯ ಮನಸ್ಸಿನ ದುಃಖ ಪರಿಹರಿಸುವುದು ಹೇಗೆ

' ಸುಬ್ಬೂಗೆ ಕಾಗದ ಬರೆಯಲೇ ?

' ನಾನೇ ಹೋಗಿ ಅವನನ್ನು ಕರೆದುಕೊಂಡು ಬರಲೇ? '

ಎಂದು ಯೋಚಿಸಿ,

‘ ಬೇಡ ಬೇಡ—ಒಲ್ಲದ ಕರುವನ್ನು ನೀರಿಗೆಳೆಯುವುದು ಏಕೆ ? ’ ಎಂದುಕೊಂಡ.

ಸೀತೆಗೆ ದಿನ ತುಂಬಿ ಬಂದಿದ್ದುದರಿಂದ ರಾಮಸ್ವಾಮಿ, ಊರು ಬಿಟ್ಟು ಹೊರಗೆ ಹೋಗುವಂತಿರಲಿಲ್ಲ.

ಅವಳಿಗೆ ಒಂಭತ್ತು ತಿಂಗಳು ತುಂಬಿತು. ಒಂದು ದಿನ ಪ್ರಸವವೇದನೆ ಆರಂಭವಾಯಿತು.

ರಾಮಸ್ವಾಮಿಯ ಕಾಗದ ನೋಡಿಕೊಂಡು ಶ್ರೀನಿವಾಸಮೂರ್ತಿ, ತಾಯಿಯೊಂದಿಗೆ ಬಂದ.

ಗುರುವಾರ ಒಂಭತ್ತು ಗಂಟೆಗೆ ಸರಿಯಾಗಿ, ಸೀತಾ ಗಂಡುಮಗುವನ್ನು ಪ್ರಸವಿಸಿದಳು.

ಶ್ರೀನಿವಾಸಮೂರ್ತಿ ನಾಮಕರಣಶಾಸ್ತ್ರ ಮುಗಿಸಿಕೊಂಡು ಊರಿಗೆ ಹಿಂದಿರುಗುವುದು ಅನಿವಾರ್ಯವಾಯಿತು.

ಮಗುವಿಗೆ ಹೆಸರಿಡುವ ವಿಷಯದಲ್ಲಿ ದೊಡ್ಡ ಜಿಜ್ಞಾಸೆಯೆದ್ದಿತು.

ಅಚ್ಚಮ್ಮನವರು ಮಗುವಿಗೆ ತಮ್ಮ ತಂದೆ ನಾರಣಪ್ಪನವರ ಹೆಸರಿಡ ಲಿಚ್ಛಿಸಿದರು. ಸೀತಾ ತನ್ನ ಪಟ್ಟು ಬಿಡಲಿಲ್ಲ.

ರಾಮಸ್ವಾಮಿ ಮಧ್ಯೆ ಪ್ರವೇಶಿಸಿ,

“ ಮಗು ಹೆಸರು ನಾರಾಯಣ ಎಂದಿರಲಿ–ಮನೆಯಲ್ಲಿ ರತ್ನಾಕರ ಎಂದು ಕೂಗಿದರಾಯಿತು ”

ಎಂದು ‘ ಖಾಜಿನ್ಯಾಯ ’ ಮಾಡಿದ.

ಕಮಲಾಕ್ಷಮ್ಮ, ಯೋಗಾನರಸಿಂಹಯ್ಯನವರ ಆನಂದಕ್ಕೆ ಪಾರವೇ ಇಲ್ಲವಾಯಿತು.

ಒಂದು ದಿನ ಸಂಜೆ ಯೋಗಾನರಸಿಂಹಯ್ಯನವರ ಮನೆಗೆ ಬಂದ ಪದ್ಮನಾಭರಾಯರು,

“ ಅಮ್ಮಾ—ಕಮಲಾಕ್ಷಮ್ಮನವರೇ—ಇಲ್ಲಿ ಸ್ವಲ್ಪ ಬನ್ನಿ ” ಎಂದರು.

ಕಮಲಾಕ್ಷಮ್ಮ ಬಂದು ನಿಲ್ಲಲು,

“ ನಿಮ್ಮ ಯಜಮಾನ—ಈ ಯೋಗಾ, ಏಕೆ ಹೀಗೆ ಮನೆಮೂಳನಾಗಿದ್ದಾನೆ ಸ್ವಲ್ಪ ವಿಚಾರಿಸಿ.”

ಕಮಲಾಕ್ಷಮ್ಮ ನಕ್ಕು,

" ನೀವೇ ವಿಚಾರಿಸಿ " ಎಂದರು.

" ಮೊಮ್ಮಗ ಹುಟ್ಟಿದ ಎಂದು ಇವನು ಹಳೇ ಸ್ನೇಹಿತರನ್ನೆಲ್ಲಾ ದೂರ ಮಾಡುವುದೇ ? "

" ಸುಮ್ಮನೆ ಯಾಕೆ ಮಾತಾಡ್ತಿ—ನನ್ನ ಮೊಮ್ಮಗನ್ನ ನೋಡೋ" ಎಂದು ಯೋಗಾನರಸಿಂಹಯ್ಯ ಹೇಳಿದರು.

" ಅಲ್ಲಯ್ಯಾ—ಮಗಳಿಗೆ ಮಗ ಹುಟ್ಟಿದ ಎಂದು ನಿನಗೆ ಇಷ್ಟು ಜಂಭ ಬಂದಿದೆ—ರಾಮೂಗೆ ಮಗ ಹುಟ್ಟಿದರೆ ನಿನ್ನ ಹಿಡಿಯೋರೇ ಇಲ್ಲ."

" ಅದೂ ಬಹಳ ದೂರವಿಲ್ಲ ರಾಯರೇ " ಎಂದು ಕಮಲಾಕ್ಷಮ್ಮ ಹೇಳಿದರು.

ಪದ್ಮನಾಭರಾಯರು ಸಂತೋಷದಿಂದ,

" ನಿಜವೇನಮ್ಮಾ " ಎಂದರು.

" ನಿಜಾಪ್ಪ."

" ನಿಮ್ಮ ಮನೆ ನಂದಗೋಕುಲದ ಹಾಗೆ ಬೆಳೆಯುತ್ತಿದೆ—ತುಂಬ ಸಂತೋಷ."

" ಹಿರಿಯರು—ಎಲ್ಲಾ ನಿಮ್ಮ ಆಶೀರ್ವಾದಾಪ್ಪ."

" ನಮ್ಮ ಆಶೀರ್ವಾದ ಅಲ್ಲಾಮ್ಮ—ನಿಮ್ಮ ಆತ್ಮಾರ್ಪಣ—" ಎಂದು ರಾಯರು ಕಳಕಳಿಯಿಂದ ನುಡಿದರು.

## ೩೭

ನಿಯಮಿತವೇಳೆಗೆ ಎಚ್. ಎಂ. ಟಿ. ಕಟ್ಟಡ ಮುಗಿಸಿ ರಾಮಸ್ವಾಮಿ ಕೃತಾರ್ಥನಾದ.

ಮ್ಯಾನೇಜಿಂಗ್ ಡೈರೆಕ್ಟರು, ಶಾಮಸುಂದರ್ ಅವರಿಗೆ ಕಾಗದ ಬರೆದು ನೆನಕೆಗಳನ್ನು ಸಲ್ಲಿಸುತ್ತಾ, ರಾಮಸ್ವಾಮಿಯ ಶ್ರದ್ಧೆ, ದಕ್ಷತೆ, ಪ್ರತಿಭೆಯನ್ನು ಪ್ರಶಂಸಿಸಿದ್ದರು.

ಮ್ಯಾನೇಜಿಂಗ್ ಡೈರೆಕ್ಟರ್ ಕಾಗದವನ್ನು ರಾಮಸ್ವಾಮಿ ಕೈಗಿತ್ತು ಶಾಮಸುಂದರ್ ಅವರು,

" ನನ್ನ ನೆನಕೆಗಳನ್ನೂ ಸ್ವೀಕರಿಸಿ " ಎಂದರು.

" ನೀವು ನನಗೆ ನೆನಕೆ ಸಲ್ಲಿಸಬೇಕೇ ಸರ್—"

" ಅಗತ್ಯವಾಗಿ—ನೀವು ನಿಯತಕಾಲಕ್ಕೆ ಕೆಲಸ ಮುಗಿಸದಿದ್ದರೆ ನಾನು ದೊಡ್ಡ ಗಿರಾಕಿ ಕಳೆದುಕೊಳ್ಳುತ್ತಿದ್ದೆ.–ಈ ಕಾಗದ ನೋಡಿ ಮಿ|| ರಾಮಸ್ವಾಮಿ"

ಎಂದು ಉದ್ದನೆಯ ಲಕೋಟೆಯೊಂದನ್ನು ಅವನ ಕೈಗಿತ್ತರು.

ರಾಮಸ್ವಾಮಿ ಕಾಗದ ಮತ್ತು ಅದರಲ್ಲಿದ್ದ ನಕ್ಷೆ ನೋಡಿಕೊಂಡು,

" ಉತ್ತರ ಏನು ಬರೆದಿರಿ ಸರ್ " ಎಂದು ಕೇಳಿದ.

" ಏನೂ ಬರೆದಿಲ್ಲ. ಒಂದು ವರ್ಷದಲ್ಲಿ ೬೦ ಕಟ್ಟಡಗಳಾಗಬೇಕೆಂದು ಸೂಚಿಸಿದ್ದಾರೆ. ಸಾಧ್ಯವೇ ಯೋಚಿಸಿ."

" ಉಕ್ಕು, ಸಿಮೆಂಟ್ ಅವರು ಒದಗಿಸುತ್ತಾರೆಯೇ ? "

" ಒದಗಿಸುತ್ತಾರೆ."

" ಹಾಗಾದರೇಕೆ ಅನುಮಾನಿಸುವಿರಿ ಸರ್. ಒಪ್ಪಿಕೊಳ್ಳಿ. ಐದೂವರೆ ಲಕ್ಷ ರೂಪಾಯಿಗಳ ಕಂಟ್ರ್ಯಾಕ್ಟ್ ಬಿಡುವುದೇಕೆ ? "

" ಈ ಕೆಲಸ ನೀವೇ ನಿರ್ವಹಿಸಬೇಕು."

" ಆಗಬಹುದು ಸರ್."

ಶಾಮಸುಂದರ್ ಡ್ರಾಯರ್ ಎಳೆದು ಅದರಲ್ಲಿದ್ದ ಒಂದು ಚೆಕ್ ತೆಗೆದುಕೊಂಡು, ರಾಮಸ್ವಾಮಿಯ ಕೈಗಿತ್ತರು.

ರಾಮಸ್ವಾಮಿ ಆಶ್ಚರ್ಯಚಕಿತನಾಗಿ,

" ಇದು ಏತಕ್ಕೆ ಸಾರ್."

" ಎಚ್. ಎಂ. ಟಿ. ಕಂಟ್ರ್ಯಾಕ್ಟ್ ಮೂರು ಲಕ್ಷದ್ದು—ಅದರ ಮೇಲೆ ನಿಮಗೆ ಶೇಕಡ ಒಂದರಂತೆ ಕೊಟ್ಟಿದ್ದೇನೆ."

" ಲೋಕಹಿತಾರ್ಥಕ್ಕಾಗಿ ದೇವರು, ಮನುಷ್ಯರೂಪತಾಳಿ ಈ ಲೋಕದಲ್ಲಿ ಅವತರಿಸುತ್ತಾನೆ ಎಂದು ಪುರಾಣಗಳು ಹೇಳುವ ಮಾತು ಸುಳ್ಳಲ್ಲ."

" ನಿಷ್ಠೆಯಿಂದ ಕೆಲಸ ಮಾಡುವವರನ್ನು ಪ್ರೋತ್ಸಾಹಿಸಬೇಕಾದುದು ನಮ್ಮ ಕರ್ತವ್ಯ ಮಿ॥ ರಾಮಸ್ವಾಮಿ. ಇದರಿಂದ ನಮಗೆ ಲಾಭವೇ ವಿನಾ ನಷ್ಟವಿಲ್ಲ."

ರಾಮಸ್ವಾಮಿ ನಕ್ಷೆಯನ್ನು ಬಿಚ್ಚಿ ಶಾಮಸುಂದರ್ ಅವರ ಮುಂದಿಟ್ಟು,

" ಸರ್—ನಿಮ್ಮಿಂದ ನನಗೊಂದು ಉಪಕಾರವಾಗಬೇಕು."

" ಹೇಳಿ."

" ಇದರಲ್ಲಿ 'ಎ'—'ಬಿ'—'ಸಿ' ಟೈಪುಗಳ ಇಪ್ಪತ್ತು ಇಪ್ಪತ್ತು ಮನೆಗಳಿವೆ. ನನಗೆ 'ಎ' ಟೈಪಿನ ಒಂದು ಮನೆ ಕೊಡಿಸಿಕೊಡಿ. ಹನ್ನೆರಡು ಸಾವಿರ ರೂಪಾಯಿ ಒಮ್ಮೆಲೇ ತೆತ್ತು ನಾನು ಮನೆ ಕೊಳ್ಳಲಾರೆ. ಕಂತುಗಳಲ್ಲಿ ಪಾವತಿ ಮಾಡುವುದು ನನಗೆ ಅನುಕೂಲ."

" ಆಗಲಿ—ನಾನು ಚೇರ್ಮನ್ ಅವರ ಜತೆ ಮಾತನಾಡುತ್ತೇನೆ "

ಎಂದು ಆಶ್ವಾಸನವಿತ್ತರು.

ಮನೆಗೆ ಧಾವಿಸಿ ಬಂದ ರಾಮಸ್ವಾಮಿ, ಚೆಕ್ಕನ್ನು ತಾಯಿಯ ಕೈಯಲ್ಲಿಟ್ಟ.

ಕಮಲಾಕ್ಷಮ್ಮನವರು ಆನಂದಭಾಷ್ಪ ಸುರಿಸುತ್ತಾ,

" ಅಪ್ಪಾ—ನಿನಗೆ ಲಕ್ಷ್ಮೀಕಟಾಕ್ಷವಾಗಿದೆ. ನೀನು ಪುಣ್ಯವಂತ " ಎಂದರು.

"ಅಮ್ಮಾ, ಚೆಕ್ ಮುರಸಿ ನಗದು ಹಣ ತಂದುಕೊಡುತ್ತೇನೆ. ಪದ್ಮನಾಭರಾಯರಿಗೆ ಕೊಟ್ಟುಬಿಡು. ಆದಷ್ಟು ಬೇಗ ಅವರ ಉಳಿದ ಎರಡು ಸಾವಿರ ರೂಪಾಯಿಯಿತ್ತು ಋಣವಿಮುಕ್ತರಾಗೋಣ."

"ಹೌದು ರಾಮು—ಕೊಟ್ಟವರ ಒಡವೆ ಮೊದಲು ಕೊಟ್ಟುಬಿಡಬೇಕಪ್ಪ. ಇದ್ದರೆ ನಾವು ಉಣ್ಣೋಣ; ಇಲ್ಲವಾದರೆ ಉಪವಾಸವಿರೋಣ. ಕಂಡವರ ಗಂಟು ಮುಳುಗಿಸುವುದು ಬೇಡ."

"ಅಮ್ಮ, ರಾಯರು ನಮ್ಮಿಂದ ಬಡ್ಡಿ ತೆಗೆದುಕೊಳ್ಳುವುದಿಲ್ಲ. ಒಂದು ಕೆಲಸಮಾಡು. ನಾಳೆ ಪದ್ಮನಾಭರಾಯರನ್ನೂ ನಾಗೂಬಾಯಿಯವರನ್ನೂ ಇಲ್ಲಿಗೆ ಊಟಕ್ಕೆ ಕರೆ. ರಾಯರಿಗೆ ಒಂದು ಜತೆ ಪಂಚೆ, ನಾಗೂಬಾಯಿಯವರಿಗೆ ಸೀರೆ ಕುಪ್ಪಸ ಹಣದ ಜತೆ ಕೊಡೋಣ."

"ಸೊಗಸಾದ ಯೋಚನೆ ಮಾಡಿದ್ದೀ ರಾಮು—ಹಾಗೇ ಮಾಡೋಣ" ಎಂದರು.

ರಾಮಸ್ವಾಮಿ, ರತ್ನಾ ಹೋಗಿ ರಾಯರಿಗೂ ನಾಗೂಬಾಯಿಯವರಿಗೂ ಆಮಂತ್ರಣವಿತ್ತು ಬಂದರು.

ಬೆಳಿಗ್ಗೆ ಬೇಗ ಎದ್ದ ಕಮಲಾಕ್ಷಮ್ಮ, ರತ್ನನ ಸಹಾಯ ಪಡೆದು ಔತಣದ ಅಡಿಗೆ ಮಾಡಿದರು.

ಹನ್ನೆರಡಕ್ಕೆ ಸರಿಯಾಗಿ ಗಂಡನೊಂದಿಗೆ ಬಂದ ನಾಗೂಬಾಯಿ,

"ನಿಮಗೇನೂ ಕೆಲಸವಿಲ್ಲವೇನ್ರೀ ಕಮಲಾಕ್ಷಮ್ಮ" ಎಂದು ಕೇಳಿದರು.

"ಏಕಮ್ಮ?"

"ಮನೆಯಲ್ಲಿ ಬಸುರಿ — ಬಾಣಂತಿ. ಈಗ ನಮ್ಮನ್ನು ಊಟಕ್ಕೆ ಕರೆಯದಿದ್ದರೆ ಏನು ನಿಂತುಹೋಗ್ತಿತ್ತು."

"ರಾಮು ಒಂದು ದೊಡ್ಡ ಕೆಲಸ ಮುಗಿಸಿದ್ದಾನ್ರೀ. ಸದ್ಯದಲ್ಲೀ ಇನ್ನೊಂದು ಭಾರಿ ಕೆಲಸ ಒಪ್ಪಿಕೊಳ್ಳುತ್ತಾನೆ. 'ಅಮ್ಮ ನಾವು ಚೆನ್ನಾಗಿರುವುದನ್ನು ಕಂಡರೆ ಸಂತೋಷಪಡುವವರು ರಾಯರು, ನಾಗೂಬಾಯಿಯವರು. ಅವರನ್ನು ಊಟಕ್ಕೆ ಕರೆಯಮ್ಮ' ಎಂದ. ಬೇಡ ಎನ್ನಲೇ ನಾಗೂಬಾಯಿ."

"ಆ ಹುಡುಗಮುಂಡೇದು ಹೇಳೋಕೆ—ನೀವು ಕೇಳೋಕೆ. ಇಬ್ಬರೂ ಸರಿಯಾಗಿದ್ದೀರಿ ಬಿಡಿ"

ಎಂದು ಅಲ್ಲಿಯೇ ಇದ್ದ ರತ್ನನ ಕಡೆ ತಿರುಗಿ,

" ನಿನ್ನ ಗಂಡನ್ನ ಬಯ್ದೋಂತ ಕೋಪವೇನೇ ರತ್ನಾ ? "

" ನಿಮ್ಮ ಕೈಯಲ್ಲಿ ಬಯ್ಯಿಸಿಕೊಳ್ಳದಿದ್ದರೆ ಅವರಿಗೆ ತಿಂದನ್ನ ಜೀರ್ಣ ವಾಗಲ್ಲ ನಾಗತ್ತೆ."

" ಸರಿ ಬಿಡು. ಈ ಮನೆ ಹುಚ್ಚರ ಸಂತೆಯಾಗಿ ಹೋಯಿತು."

ಎಂದು ನಕ್ಕರು.

ಮೊದಲು ಗಂಡಸರ ಊಟವಾಯಿತು.

ತರುವಾಯ ನಾಗೂಬಾಯಿ, ರತ್ನಾ, ಸೀತಾ ಅವರ ಊಟವಾಯಿತು.

ಕೊನೆಯಲ್ಲಿ ಕಮಲಾಕ್ಷಮ್ಮ ಊಟಕ್ಕೆ ಕುಳಿತರು—ರತ್ನನೇ ಬಡಿಸಿದಳು.

ಎಲ್ಲರ ಊಟವಾದ ಮೇಲೆ, ರಾಮು ಒಳಗೆ ಬಂದು ನಾಗೂಬಾಯಿಯ ವರಿಗೆ,

" ಸ್ವಲ್ಪ ಹೊರಗೆ ಬನ್ನಿ ಚಿಕ್ಕಮ್ಮ " ಎಂದ.

ನಾಗೂಬಾಯಿ ಹೊರಗೆ ಬಂದರು.

ಪದ್ಮನಾಭರಾಯರು ಬಂದು ಕುರ್ಚಿಯಲ್ಲಿ ಕುಳಿತಿದ್ದರು. ಅವರ ಪಕ್ಕದಲ್ಲಿ ಒಂದು ಕುರ್ಚಿಯಿತ್ತು.

" ಸ್ವಲ್ಪ ಇಲ್ಲಿ ಕುಳಿತುಕೊಳ್ಳಿ ಚಿಕ್ಕಮ್ಮ—ನಾನೂ ರತ್ನಾ ನಮಸ್ಕಾರ ಮಾಡುತ್ತೇವೆ."

ನಾಗೂಬಾಯಿ ನಾಚಿಕೊಂಡು ಹೋಗಿ ಕುಳಿತರು.

ರಾಮು, ರತ್ನಾ ಇಬ್ಬರೂ ಒಳಗೆ ಹೋಗಿ—ಒಂದೊಂದು ತಟ್ಟೆ ಹಿಡಿದು ಹೊರಬಂದರು.

ರತ್ನಾ, ನಾಗೂಬಾಯಿಯವರ ಹಣೆಗಿಟ್ಟು ಒಂದು ತಟ್ಟೆ ಅವರಿಗಿತ್ತಳು ; ರಾಮು ತನ್ನ ಕೈಯಲ್ಲಿದ್ದ ತಟ್ಟೆಯನ್ನು ರಾಯರಿಗೆ ಒಪ್ಪಿಸಿದ.

" ಇದೇನೋ ರಾಮೂ "

ಇಬ್ಬರೂ ನಮಸ್ಕರಿಸಿದರು.

ತಮ್ಮ ತಟ್ಟೆಯಲ್ಲಿದ್ದ ನೋಟುಗಳನ್ನು ರಾಯರು ನೋಡಿಕೊಂಡು,

" ಉಡುಗೊರೆ ಜತೆ ಹಣವೂ ಇದೆ ನಾಗೂ " ಎಂದರು.

ನಾಗೂಬಾಯಿ ಮೇಲಕ್ಕೆದ್ದು, ತಟ್ಟೆಯನ್ನು ಕುರ್ಚಿಯ ಮೇಲಿಟ್ಟು,

" ನೀನು ಏನೇ ಹೇಳು ರಾಮು, ನಾನು ಉಡುಗೊರೆ ಮುಟ್ಟುವುದಿಲ್ಲ "
ಎಂದರು.

ರಾಮುಸ್ವಾಮಿಯ ಕಣ್ಣುಗಳಿಂದ ಹನಿಗಳು ತೊಟ್ಟಿಕ್ಕಿದವು.

" ನನ್ನನ್ನೂ ಸೀತೂನೂ ನಿಮ್ಮ ತೊಡೆಯ ಮೇಲೆ ಸಾಕಿದಿರಿ. ನಮ್ಮ ಎಲ್ಲಾ ಕಷ್ಟಗಳಿಗೂ ಆಗಿರುವಿರಿ. ಚಿಕ್ಕಮ್ಮ, ನಿಮ್ಮ ದಯೆಯಿಂದ ಈಗ ನಾನು ಕೈತುಂಬ ಸಂಪಾದಿಸುತ್ತಿದ್ದೇನೆ. ನನ್ನ ಅಭ್ಯುದಯ ನೋಡಿ ನೀವು ಸಂತೋಷಪಡದಿದ್ದರೆ ಇನ್ನು ಯಾರು ಪಡಬೇಕು. ಉಡುಗೊರೆ ನಿರಾಕರಿಸಿ ನನಗೆ ಅಶ್ರೇಯಸ್ಸು ಕೋರಬೇಡಿ—"

ನಾಗೂಬಾಯಿ, ರಾಮುಸ್ವಾಮಿಯನ್ನಪ್ಪಿಕೊಂಡು,

" ಹಾಗನ್ನಬೇಡ ನನ್ನ ಕಂದ ಕೊಡಪ್ಪಾ, ತೆಗೆದುಕೊಳ್ಳುತ್ತೇನೆ. ಕನಸು ಮನಸಿನಲ್ಲಿಯೂ ನಾನು ನಿನಗೆ ಅಶ್ರೇಯಸ್ಸು ಕೋರಲ್ಲಪ್ಪಾ " ಎಂದರು.

## ೩೮

ರತ್ನಾಕರ ಐದನೆಯ ತಿಂಗಳಿಗೆ ಕಾಲಿಟ್ಟ.

ಶ್ರೀನಿವಾಸಮೂರ್ತಿ, ರಾಮಸ್ವಾಮಿಗೆ ಕಾಗದ ಬರೆದು,

" ಸೀತೆಯನ್ನೂ ಮಗುವನ್ನೂ ಕಳಿಸಿಕೊಡು "

ಎಂದು ಕೋರಿದ್ದ.

ಅಳಿಯನ ಕಾಗದ ನೋಡಿದ ಕಮಲಾಕ್ಷಮ್ಮನವರು,

" ಕಳಿಸಬೇಕಪ್ಪಾ. ಎಂದಿದ್ದರೂ ಸೀತೂ ಅವರ ಮನೆಯ ಸೊತ್ತು—ಹಾಗೇ ರತ್ನನನ್ನೂ ಬಿಟ್ಟು ಬರಬೇಕು ರಾಮು — ಅವಳಿಗೂ ಐದು ತಿಂಗಳು."

" ಜೋಯಿಸರನ್ನು ಕೇಳಿ. ಒಳ್ಳೆಯ ದಿವಸ ಗೊತ್ತುಮಾಡಮ್ಮ. ಕಂಪೆನಿ ಕಾರು ತರುತ್ತೇನೆ. ನೀನೂ ನಾನೂ ಆನೇಕಲ್ಲಿಗೆ ಹೋಗಿ ಸೀತನ್ನ, ರತ್ನನ್ನ ಬಿಟ್ಟುಬರೋಣ "

ಎಂದು ಹೇಳಿದ.

ರತ್ನನಿಗೆ ಅತ್ತೆಯನ್ನು ಬಿಟ್ಟು ಹೋಗಲು ಮನಸ್ಸಿಲ್ಲ.

ಆನೇಕಲ್ ಪ್ರಯಾಣಕ್ಕೆ ಎರಡು ದಿನಗಳು ಉಳಿದವು.

ರತ್ನಾ ಮ್ಲಾನವದನಳಾಗಿದ್ದುದನ್ನು ಕಂಡ ಕಮಲಾಕ್ಷಮ್ಮ ಅವಳ ಬಳಿಗೆ ಬಂದು ಕೆನ್ನೆ ನೇವರಿಸಿ,

" ಯೋಚಿಸಬೇಡ ರತ್ನಾ–ಒಂಭತ್ತನೆಯ ತಿಂಗಳಲ್ಲಿ ನಾನು ಬರುತ್ತೇನೆ. ರಾಜಮ್ಮ ಹೊರಗಿನ ಕೆಲಸ ನೋಡಿಕೊಳ್ಳಲಿ—ನಾನು ನಿನ್ನನ್ನು ನೋಡಿ ಕೊಳ್ಳುತ್ತೇನೆ."

" ನನ್ನ ಕಳಿಸಬೇಡಿ ಅತ್ತೆ."

"ನನಗೆ ನೀನು ಭಾರಯೆಂದು ಕಳಿಸುತ್ತಿದ್ದೇನೆಯೇ ರತ್ನಾ-ಚೊಚ್ಚಿಲು ಬಾಣಂತನ ಮಾಡಬೇಕು ಎಂದು ರಾಜಮ್ಮನವರಿಗೆ ಆಸೆಯಿರುವುದಿಲ್ಲವೇ? ಅವರ ಮನಸ್ಸನ್ನೇಕೆ ನೋಯಿಸಬೇಕು."

"ಇನ್ನು ೮-೯ ತಿಂಗಳು ನೀವು ಒಬ್ಬರೇ ಇರಬೇಕಲ್ಲ ಅತ್ತೆ."

"ಆನೇಕಲ್ ಎಷ್ಟು ದೂರ ಇದೆ ಮಗು. ಕಾರಿನಲ್ಲಿ ಅರ್ಧಗಂಟೆಯ ದಾರಿ. ನಿನ್ನ ಜ್ಞಾಪಕ ಬಂದ ಕೂಡಲೆ ಓಡಿಬಂದು ಬಿಡುತ್ತೇನೆ ಸುಮ್ಮನಿರು" ಎಂದು ಸಂತೈಸಿದರು.

ಎರಡು ದಿನಗಳ ತರುವಾಯ ರಾಮಸ್ವಾಮಿ, ತಂಗಿ, ತಾಯಿ, ಹೆಂಡತಿ, ಸೋದರಳಿಯನೊಂದಿಗೆ ಆನೇಕಲ್ಲಿಗೆ ಪ್ರಯಾಣಮಾಡಿದ.

ಅವನು ಒಂದು ದಿನವೂ ಆನೇಕಲ್ಲಿನಲ್ಲಿ ನಿಲ್ಲಲು ಸಾಧ್ಯವಿರಲಿಲ್ಲ.

ಮೂರನೆಯ ದಿನವೇ ಅವನು ಹೊರಟು ನಿಲ್ಲಲು ರತ್ನಾ ಅವನ ಬಳಿಗೆ ಬಂದು,

"ಇವತ್ತೇ ಹೊರಡಬೇಕೇ?" ಎಂದು ಕೇಳಿದಳು.

"ಒಂದು ವರ್ಷದೊಳಗಾಗಿ ನಾನು ಅರವತ್ತು ಮನೆ ಕಟ್ಟಿಕೊಡ ಬೇಕಾಗಿದೆ ರತ್ನಾ."

"ಮಗನಿಗೆ ಏನು ಹೆಸರಿಡಲಿ."

"ಶಾಮಸುಂದರ್—ಮಗಳಾದರೆ?"

"ನೀವೇ ಹೇಳಿ."

"ಶಾಮಲಾ!"

"ಅತ್ತೆಮ್ಮನವರನ್ನು ಸರಿಯಾಗಿ ನೋಡಿಕೊಳ್ಳಿ."

"ನೀನೂ ಸರಿಯೆ—ಅಮ್ಮ ನನ್ನ ಮಾತು ಕೇಳುತ್ತಾಳೆಯೇ?"

"ಅವರ ಮನಸ್ಸಿಗೆ ಘಾವಂತ ಉಂಟುಮಾಡಬೇಡಿ."

"ನಾನೇನು ಮಾಡುತ್ತೇನೆ ರತ್ನಾ."

"ಹೊತ್ತಿಗೆ ಹೊತ್ತಿಗೆ ನೀವು ಊಟ ಮಾಡುವುದಿಲ್ಲ. ಅತ್ತೆ ಕಣ್ಣೀರು ಹಾಕುತ್ತಾರೆ. 'ಇಷ್ಟು ದುಡಿಯುವ ಮಗನಿಗೆ ಎರಡು ಹೊತ್ತು ಊಟ ಇಡಲಾರದಾಗಿದ್ದೇನೆ ರತ್ನಾ' ಎನ್ನುತ್ತಾರೆ."

"............................................................"

" ಎಷ್ಟೇ ಕೆಲಸವಿದ್ದರೂ ಹತ್ತು ನಿಮಿಷ ಪುರಸತ್ತು ಮಾಡಿಕೊಂಡು ಮನೆಗೆ ಬಂದು ಊಟಮಾಡಿ ಹೋಗಿ."

" ಆಗಲಿ."

" ನಾನು ಬರುವ ವೇಳೆಗೆ ನೀವು ಬಿಸಲಲ್ಲಿ ಒಣಗಿ ಒಣಗಿ ಕಪ್ಪಗೆ...."

ಎನ್ನುತ್ತಿದ್ದಂತೆ ಅವಳ ಕಣ್ಣುಗಳಿಂದ ಹನಿಗಳು ಮಿಡಿದವು.

ರಾಮಸ್ವಾಮಿ ಹೆಂಡತಿಯನ್ನಪ್ಪಿ,

" ಅಮ್ಮನಂಥ ತಾಯಿಗೆ, ನಿನ್ನಂಥ ಹೆಂಡತಿಗೆ ದುಡಿಯುವುದು ಒಂದು ಭಾಗ್ಯ ರತ್ನಾ."

" ಬೇಗ ಬನ್ನಿ ಹೊತ್ತಾ......"

" ಹೊತ್ತಾಯಿತು ಬಿಡು "

ಎಂದವಳ ತೋಳ್ಸೆರೆಯಿಂದ ಮೆಲ್ಲನೆ ಬಿಡಿಸಿಕೊಂಡು ಹೊರಗೆ ಬಂದ.

ಪ್ರಯಾಣಕ್ಕೆ ಸಿದ್ಧರಾಗಿ ನಿಂತಿದ್ದ ಕಮಲಾಕ್ಷಮ್ಮನವರ ಬಳಿಗೆ ಬಂದ ರತ್ನಾ, ಅವರ ಎರಡೂ ಪಾದಗಳನ್ನೂ ಹಿಡಿದು ನಮಸ್ಕರಿಸಿದಳು.

ಕಮಲಾಕ್ಷಮ್ಮ ಕೈಹಿಡಿದು ಸೊಸೆಯನ್ನು ಮೇಲಕ್ಕೆಬ್ಬಿಸಿ,

" ರತ್ನಾ—ಅಳಬೇಡಪ್ಪಾ ! " ಎಂದರು.

" ಬೇಗ ಬನ್ನಿ—ಅತ್ತೆ."

" ಖಂಡಿತ ಬರುತ್ತೇನೆ ತಾಯಿ "

ಎಂದು ಮೆಲ್ಲನೆ ಹೊರಗೆ ಬಂದರು.

## ೩೯

ಚಿತ್ರದುರ್ಗದ ಡೆಪ್ಯುಟಿ ಕಮಿಾಷನರ್ ಮಹಮದ್ ಗವಾನ್ ಸಾಹೇಬರು ರಿಟೈರ್ ಆಗಲು ಒಂದೇ ವರ್ಷ ಉಳಿದಿತ್ತು. ಆರು ತಿಂಗಳು ಅವರಿಗೆ ರಜವಿದ್ದುದರಿಂದ, ಅವರ ಅಧಿಕಾರಾವಧಿ ಆರೇ ತಿಂಗಳಿತ್ತು.

ಪುಣ್ಯವಂತರ ಮನೆಯಲ್ಲಿ ಹುಟ್ಟಿ ಬೆಳೆದಿದ್ದ ಸಾಹೇಬರಿಗೆ ಆಲಸ್ಯಜೀವನ ಮೈಗೂಡಿಹೋಗಿತ್ತು. 'ಸಾಹೇಬರು ಕೆಲಸದಲ್ಲಿ ಇದ್ದೆಡೆಗಳಲ್ಲೆಲ್ಲಾ ಅಧಿಕಾರ ನಡಸುತ್ತಿದ್ದವನು ಅವರ ಪರ್ಸನಲ್ ಕ್ಲರ್ಕ್ !

ಚಿತ್ರದುರ್ಗದಲ್ಲಿಯೂ ಅದೇ ಸಂಪ್ರದಾಯ ನಡೆದಿತ್ತು. ಸಾಹೇಬರ ಪರ್ಸನಲ್ ಕ್ಲರ್ಕ್ ವೆಂಕೋಬರಾಯ, ಡಿ. ಸಿ. ಕಛೇರಿಯ ಸರ್ವಾಧಿಕಾರಿಯಾಗಿದ್ದ.

ಸಾಹೇಬರ ಆಲಸ್ಯಸ್ವಭಾವದ ಜತೆಗೆ ಅತೃಪ್ತಿಯೂ ಬೆರೆತಿತ್ತು. ಸಾಹೇಬರು ಎಕ್ಸ್‌ಟೆನ್‌ಷನ್ನಿಗೆ (extension) ಪ್ರಯತ್ನಿಸಿ ವಿಫಲರಾಗಿದ್ದರು. ಅವರ ಆಲಸ್ಯ, ಅತೃಪ್ತಿಗಳ ಪೂರ್ಣಲಾಭ ದೊರೆತುದು ವೆಂಕೋಬರಾಯನಿಗೆ.

ವೆಂಕೋಬರಾಯ, ಅಸಿಸ್ಟೆಂಟ್ ಕಮಿಾಷನರ್ ಪರ್ಸನಲ್ ಕ್ಲರ್ಕ್ ಕಾಳಪ್ಪ ಪರಮಾಪ್ತ ಸ್ನೇಹಿತರು. ಇಬ್ಬರಿಗೂ ಇಸ್ಪೇಟಿನ ನಾದ. ಇಬ್ಬರೂ ಸಂಬಳೇತರ ಸಂಪಾದನೆಯಲ್ಲಿ ನಿಸ್ಸಿಮರು—ವೆಂಕೋಬರಾಯ, ಕಾಳಪ್ಪನ ಕೈ ಬೆಚ್ಚಗಾಗದೆ ಯಾವ ಕಾಗದವೂ ಅವರ ಕಛೇರಿಗಳಿಂದ ಹೊರ ಬರುತ್ತಿರಲಿಲ್ಲ.

ಒಂದು ದಿನ ಕಛೇರಿ ಮುಗಿಸಿಕೊಂಡು ಗೋಪಿ ಹೋಟಲಿನಲ್ಲಿ ಸೆಟ್ ದೋಸೆ, ಕಾಫಿ ತೀರಿಸಿಕೊಂಡು ಇಬ್ಬರೂ ವಾಯುವಿಹಾರ ಹೊರಟರು.

"ನಿಮ್ಮ ಸಾಹೇಬರಿಗೆ ಎಕ್ಸ್‌ಟೆಂಷನ್ ಕೊನೆಗೂ ಸಿಕ್ಕಲಿಲ್ಲವೇ ವೆಂಕೋಬಿ—"

" ಇಲ್ಲ ಕಣಯ್ಯಾ—ಈ ಗುಗ್ಗೂನೇ ಇದ್ದರೆ ಚೆನ್ನಾಗಿತ್ತು. ಇವರ ಸ್ಥಳಕ್ಕೆ ಯಾರು ಬರುತ್ತಾರೋ ಬೆಂಕಿನವಾಬರು."

" ನಮ್ಮ ಸಾಹೇಬರ ಸಹವಾಸವೂ ಕಷ್ಟವಾಗಿದೆಯಪ್ಪ."

" ಏಕೆ ?

ಈ ಮನುಷ್ಯ ' ಶಾಕಾಯ, ಲವಣಾಯ ' ತೆಗೆದುಕೊಳ್ಳುತ್ತಾನೋ ಇಲ್ಲವೋ ಗೊತ್ತಿಲ್ಲ. ಮಹಾ ಜಬರ್‌ದಸ್ತು—ಮಾತಿನಲ್ಲಿ ಬಲು ಬಿಗಿ—"

" ಅಮ್ಮಾವರು ಹೇಗೋ ?"

" ಅದೂ ಗೊತ್ತಾಗಿಲ್ಲ."

" ನಾಳೆ ಎರಡು ವೀಸೆ ಬೆಣ್ಣೆ ತೆಗೆದುಕೊಂಡು ಹೋಗಿ ಕೊಡು—ತಾನೇ ಗೊತ್ತಾಗತ್ತೆ."

" ಅಷ್ಟಕ್ಕೆಲ್ಲಾ ಜಗ್ಗುವ ಹಾಗೆ ಕಾಣಲಿಲ್ಲ ವೆಂಕೋಬಿ."

" ಸಣ್ಣದರಿಂದ ಷುರು ಮಾಡಬೇಕು ಕಾಳಪ್ಪ. ಮೊದಲೇ ದೊಡ್ಡದು ತೋರಿಸಿದರೆ ನೀನು ದಿವಾಳಿಯೆದ್ದು ಹೋಗುತ್ತೀ."

" ನಮ್ಮ ಸಾಹೇಬನೂ ಕೈಗೆ ಸಿಕ್ತಾನೇಂತೀಯಾ ? "

" ಅವರಪ್ಪನೂ ಸಿಕ್ತಾನೆ ಬಿಡಯ್ಯ—ಸರ್ವಜ್ಞನ ವಚನ ಕೇಳಿದ್ದೀಯೋ ಇಲ್ಲವೋ—"

" ನಿನ್ನ ಬಾಣ ನಾಳೆಯೇ ಪ್ರಯೋಗಿಸುತ್ತೀನಯ್ಯಾ " ಎಂದ.

ಬೆಳಿಗ್ಗೆ ಎದ್ದು ಎ. ಸಿ. ಸಾಹೇಬರು (ಅಸಿಸ್ಟೆಂಟ್ ಕಮಿಷನರು) ವಾಕಿಂಗ್ ಹೋಗುವ ವಿಷಯ ಕಾಳಪ್ಪನಿಗೆ ಗೊತ್ತಿತ್ತು.

ಆ ಸಮಯ ಸಾಧಿಸಿ ಕಾಳಪ್ಪ ಎ. ಸಿ. ಸಾಹೇಬರ ಮನೆಗೆ ಹೋದ.

ಸಾಹೇಬರ ಮನೆಯ ಜವಾನ ದಾಸ,

" ವಾಕಿಂಗ್ನಿಂದ ಸಾಯೇಬ್ರು ಇನ್ನೂ ಬಂದಿಲ್ಲ ಬುದ್ಧಿ " ಎಂದ.

" ಅಮ್ಮನವರಿಗೆ ತಿಳಿಸು."

ದಾಸ ಹೋಗಿ ತಿಳಿಸಲು, ಅಮ್ಮಾವರು ಹೊರಗೆ ಬಂದು,

" ಏನು ಕಾಳಪ್ಪನವರೇ ? " ಎಂದರು.

ಕಾಳಪ್ಪ ಬೆಣ್ಣೆಯ ಪ್ಯಾಕೆಟ್ ಅವರ ಮುಂದಿಟ್ಟು,

" ಹಳ್ಳಿಯಿಂದ ಬೆಣ್ಣೆ ಬಂತು. ನಿಮಗೆ ಸ್ವಲ್ಪ ತಂದಿದ್ದೇನೆ."

" ಸಾಹೇಬ್ರಿಗೆ ತಿಳಿದ್ರೆ ಕೋಪಿಸಿಕೊಳ್ಳುತ್ತಾರೆ ಕಾಳಪ್ಪನವರೇ."

" ಈ ಜುಜಿಬಿ ವಿಷಯಗಳೆಲ್ಲಾ ಅವರತನಕ ಏಕೆ ಹೋಗಬೇಕು ತಾಯಿ. ಮನೆಗೆ ಏನು ಬೇಕಾದರೂ ನನಗೆ ಅಪ್ಪಣೆಮಾಡಿ."

" ಮನೆಯಲ್ಲಿ ಸಣ್ಣಕ್ಕಿ ಮುಗಿಯುತ್ತಾ ಬಂದಿದೆ."

" ನಾಳೆ ಕಳಿಸಿಕೊಡುತ್ತೇನೆ "

ಎಂದು ಹೇಳಿ ಹೊರಟು ಬಂದ.

ತನ್ನ ಪ್ರಥಮಪ್ರಯತ್ನ ನಿಸ್ಸ್ವಾರ್ಥಕವಾಗದಿದ್ದುದಕ್ಕೆ ಕಾಳಪ್ಪನಿಗೆ ಸಂತೋಷವೂ ಆಯಿತು—ಧೈರ್ಯವೂ ಬಂದಿತು.

ಕ್ರಮಕ್ರಮೇಣ ಸುಬ್ಬುಕೃಷ್ಣಯ್ಯನವರ ಮನೆಯ 'ಮನೆವಾಳುತನ' ಅವನ ಕೈಸೇರಿತು.

ಒಂದು ದಿನ ಶಾರದಾ, ಕಾಳಪ್ಪನಿಗೆ ಹೇಳಿ, ಪೇಟೆಯಿಂದ ಕೆಲವು ಸೀರೆಗಳನ್ನು ತರಿಸಿಕೊಂಡಳು. ಅವುಗಳಲ್ಲಿ ಎರಡನ್ನು ಆರಿಸಿದ್ದೂ ಆಯಿತು.

ರಾತ್ರಿ ಕ್ಲಬ್ಬಿನಿಂದ ಮನೆಗೆ ಬಂದ ಸುಬ್ಬುಕೃಷ್ಣ ಸೀರೆಗಳನ್ನು ನೋಡಿ,

" ನೀನು ಪೇಟೆಗೆ ಹೋಗಿದ್ದೆಯಾ ? " ಎಂದು ಕೇಳಿದ.

" ಇಲ್ಲ—ಕಾಳಪ್ಪನವರ ಕೈಯಲ್ಲಿ ತರಿಸಿದೆ."

" ಬೆಲೆಯೆಷ್ಟು ? "

" ಒಂದು ರೂ. ೧೧೨—ಇನ್ನೊಂದು ರೂ. ೧೧೫."

ಮೂರನೆಯ ದಿನ ಕಛೇರಿಯಲ್ಲಿ ಒಂದು ಫೈಲ್ ಹೊತ್ತುಕೊಂಡು ಕಾಳಪ್ಪ, ಸಾಹೇಬರ ರೂಮಿಗೆ ಬಂದ.

ಫೈಲ್ ಕೆಲಸ ಮುಗಿಸಿದ ಸುಬ್ಬುಕೃಷ್ಣ,

" ನಮ್ಮ ಮನೆಗೆ ಎರಡು ಸೀರೆ ತಂದುಕೊಟ್ಟದ್ದೀರಂತೆ—ಕಾಳಪ್ಪ—ಅವುಗಳ ಬೆಲೆಯೆಷ್ಟು ? "

" ಅದೆಲ್ಲಾ ಅಲ್ಪ......................."

" ಅಲ್ಪ !....ನೂರಾರು ರೂಪಾಯಿಗಳು ಅಲ್ಪವೇ ಕಾಳಪ್ಪ ? "

" ತಮ್ಮ ವಿಶ್ವಾಸದ ಮುಂದೆ ಎಲ್ಲವೂ ಅಲ್ಪ ಸ್ವಾಮಿ "

ಎಂದು ಫೈಲ್ ತೆಗೆದುಕೊಂಡು ಹೊರಗೆ ಬಂದ.

ಕಾಳಪ್ಪನ ಉಪಯುಕ್ತತೆಯನ್ನರಿತ ಸಾಹೇಬರು ಅವನನ್ನು ತಮ್ಮ 'ನರ್ಮಸಚಿವ'ನನ್ನಾಗಿ ಮಾಡಿಕೊಂಡರು.

ಕಛೇರಿಗೆ ಕಾಳಪ್ಪನೇ ಧಣಿ. ಅವನ ಮಾತೇ 'ವೇದವಾಕ್ಯ.'

ಸಾಹೇಬರನ್ನು ಸಂಪೂರ್ಣವಾಗಿ ಕೈವಶಪಡಿಸಿಕೊಂಡಿದ್ದ ಕಾಳಪ್ಪನ ದರ್ಪ, ಅಹಂಕಾರಕ್ಕೆ ಕೊನೆಮೊದಲಿಲ್ಲವಾಯಿತು.

## ೪೦

ಒಂದು ದಿನ ಬೆಳಗ್ಗೆ ಬಂದ ಟೆಲಿಗ್ರಾಮ್ ಕಮಲಾಕ್ಷಮ್ಮನವರನ್ನು ಅಧೀರರನ್ನಾಗಿ ಮಾಡಿತು.

ಟೆಲಿಗ್ರಾಮ್ ಕೊಟ್ಟ ಕೂಡಲೆ ಬರಬೇಕೆಂದು ಬೀಗಿತ್ತಿಯನ್ನು ರಾಜಮ್ಮ ಪ್ರಾರ್ಥಿಸಿದ್ದರು.

" ಏನು ಮಾಡುವುದೋ ರಾಮು ? " ಎಂದು ಕೇಳಿದರು.

" ಅವಳಿಗೆ ದಿವಸ ಎಂದು ಕಾಣುತ್ತದೆ—ಹೋಗಿಬಾಮ್ಮ."

" ನೀನು..................."

" ನಾನು ಈಗ ಹೇಗೆ ಬರಲಿ?—ಎರಡನೆಯ ಬ್ಲಾಕಿನ ಮನೆಗಳ ಕೆಲಸ ಪೂರೈಸಿದೆ. ನಾಳೆ ಅವುಗಳನ್ನು ಹೌಸಿಂಗ್ ಬೋರ್ಡ್ ವಶಕ್ಕೆ ಒಪ್ಪಿಸಬೇಕು."

" ನಾನು ನಾಗೂಬಾಯಿಯವರನ್ನು ಜತೆಗೆ ಕರೆದುಕೊಂಡು ಹೋಗುತ್ತೇನೆ. ಅಲ್ಲಿ ಸಂದರ್ಭ ನೋಡಿ ನಿನಗೆ ಟೆಲಿಗ್ರಾಮ್ ಮಾಡಿಸುತ್ತೇನೆ—ಕೂಡಲೆ ಹೊರಟುಬಾ."

" ಅದು ಸರಿ—ಹಾಗೆ ಮಾಡು "

ಎಂದು ರಾಮು ಹೇಳಿದ.

ಮಧ್ಯಾನ್ಹಾನಂತರ ಮೂರು ಗಂಟೆಯ ಬಸ್ಸಿಗೆ ಕಮಲಾಕ್ಷಮ್ಮ, ನಾಗೂಬಾಯಿ ಆನೇಕಲ್ಲಿಗೆ ಪ್ರಯಾಣ ಮಾಡಿದರು.

ರಾಜಮ್ಮನವರ ಮುಖ ನಿಸ್ತೇಜಗೊಂಡಿದ್ದುದನ್ನು ಕಂಡು ಕಮಲಾಕ್ಷಮ್ಮ ಗಾಬರಿಗೊಂಡು,

" ರತ್ನಾ ಹೇಗಿದ್ದಾಳೆ ರಾಜಮ್ಮನವರೇ " ಎಂದು ಕೇಳಿದರು.

" ಚೆನ್ನಾಗಿಯೇ ಇದ್ದಳು ಕಮಲಾಕ್ಷಮ್ಮನವರೇ— ನಿನ್ನೆಯಿಂದ ನೋವು ಬಂದು ಬಂದು ನಿಲ್ಲುತ್ತಿದೆ. ಸೂಲಗಿತ್ತಿ ವಾರಿಜಾಬಾಯಿ ಬಂದು ನೋಡಿ 'ರತ್ನಮ್ಮನ ಮನಸ್ಸಿನಲ್ಲಿ ಏನೋ ಯೋಚನೆ ಇದೆ— ಅದನ್ನು ನಿವಾರಿಸಬೇಕು' ಎಂದು ಹೇಳಿ ಹೋದರು. ನಾನು ರತ್ನನ ಬಾಯಿ ಬಿಡಿಸಲೆತ್ನಿಸಿದೆ— ಸಾಧ್ಯವಾಗಲಿಲ್ಲ. ಭಯವಾಯಿತು— ನಿಮಗೆ ಟೆಲಿಗ್ರಾಮ್ ಮಾಡಿಸಿದೆ."

" ರತ್ನಾ. ಏನು ಮಾಡುತ್ತಿದ್ದಾಳೆ."

" ಮಲಗಿದ್ದಾಳೆ."

ಕಮಲಾಕ್ಷಮ್ಮ ಮೆಲ್ಲನೆ ರತ್ನನ ರೂಮಿಗೆ ಬಂದರು.

ಉಗ್ರವೇದನೆಯನ್ನನುಭವಿಸಿದ್ದ ರತ್ನಾ ಸೋತು ಸೊರಗಿದ್ದಳು.

ಕಮಲಾಕ್ಷಮ್ಮ, ನಾಗೂಬಾಯಿ, ರಾಜಮ್ಮ ಮೆಲ್ಲನೆ ಅವಳ ಮಂಚದ ಬಳಿ ಹೋಗಿ ನಿಂತರು.

ರತ್ನಾ ಕ್ಷೀಣಸ್ವರದಲ್ಲಿ,

" ಯಾರು ? " ಎಂದಳು.

ಮಂಚದ ಮೇಲೆ ಕುಳಿತ ಕಮಲಾಕ್ಷಮ್ಮನವರು ರತ್ನನ ತಲೆ ನೇವರಿಸುತ್ತಾ,

" ನಾನು— ರತ್ನಾ " ಎಂದರು.

ರತ್ನಾ ಕಣ್ಣು ಬಿಟ್ಟು ನೋಡಿ,

" ಬಂದಿರಾ, ಅತ್ತೆ........ಅವರು............"

" ನಾಳೆಯೋ ನಾಡಿದ್ದೋ ಬರುತ್ತಾನೆ."

ಎಂದು ಅವಳ ತಲೆಯನ್ನು ಮೆಲ್ಲನೆತ್ತಿ ತಮ್ಮ ತೊಡೆಯ ಮೇಲಿಟ್ಟುಕೊಂಡರು.

ರತ್ನಾ ಅಳಲಾರಂಭಿಸಲು, ಕಮಲಾಕ್ಷಮ್ಮ ಅವಳನ್ನು ನೇವರಿಸುತ್ತಾ,

" ಅಳುವುದೇಕೆ ಹುಚ್ಚಿ—ಏನಾಯಿತು ? ನಾವೆಲ್ಲಾ ಇಲ್ಲವೇ ? "

" ಅತ್ತೆ................................."

" ಮನಸ್ಸಿನಲ್ಲಿ ಏನಿದೆ ಹೇಳು ರತ್ನಾ."

" ಸಾಯಲು ನನಗಿಷ್ಟವಿಲ್ಲ ಅತ್ತೆ — ನಿಮ್ಮನ್ನು ಬಿಟ್ಟು ಹೋಗಲಾರೆ."

"ಯಮನ ಜತೆ ಹೋರಾಡಿ, ಅವನನ್ನು ಓಡಿಸುತ್ತೇನೆ ಸುಮ್ಮನಿರು ರತ್ನಾ."

" ನಿಜವಾಗಿ ನನ್ನ ಶಾಮುನನ್ನು ನಾನು ನೋಡುತ್ತೇನೆಯೇ ಅತ್ತೆ."

" ಶಾಮು—ಶಾಮು ಯಾರು ? "

" ನಿಮ್ಮ ಮೊಮ್ಮಗ—ಅವರೇ ಹೆಸರಿಟ್ಟಿದ್ದಾರೆ."

ಕಮಲಾಕ್ಷಮ್ಮ ನಗುತ್ತಾ,

" ನಾಮಕರಣವೂ ಆಗಿಹೋಗಿದೆ " ಎಂದರು.

ಒಳಗೆ ಬಂದ ಸೂಲಗಿತ್ತಿ ವಾರಿಜಾಬಾಯಿ, ರತ್ನನನ್ನು ಪರೀಕ್ಷಿಸಿ,

" ಎಷ್ಟು ಹೆದರಿಸಿಬಿಟ್ಟಿದ್ದೆ ರತ್ನಮ್ಮ " ಎಂದಳು.

" ರತ್ನಾ ಹೇಗಿದ್ದಾಳ್ರೀ ? "

" ಹಣ್ಣು ತೊಟ್ಟು ಕಳಚಿದ ಹಾಗೆ ಹೆರಿಗೆಯಾಗುತ್ತದೆ— ಹೆದರ ಬೇಡಿಯಮ್ಮ—ನೀವು ರತ್ನಮ್ಮನ ಅತ್ತೆಯೇ ? "

" ಹೌದ್ರಿ."

" ನೀವು ಬಂದ ಕೂಡಲೆ ರತ್ನಮ್ಮನ ಸ್ಥಿತಿಯೇ ಬದಲಾಯಿಸಿತು."

" ನಾವು ಅತ್ತೆ–ಸೊಸೆ ಇದ್ದ ಹಾಗಿಲ್ಲ ವಾರಿಜಾಬಾಯಿ; ತಾಯಿ–ಮಗಳು ಇದ್ದ ಹಾಗಿದ್ದೇವೆ........ಇನ್ನೂ ವಿಳಂಬವಾಗುತ್ತದೆಯೇ ? "

" ಬೆಳಿಗ್ಗೆಯವರೆಗೆ ತಡೆಯಬಹುದು. —ನಾನು ಬೆಳಿಗ್ಗೆ ಬರುತ್ತೇನೆ "

ಎಂದು ಹೇಳಿ ಹೋದಳು.

ಕಮಲಾಕ್ಷಮ್ಮ ರಾತ್ರಿ ರತ್ನನ ರೂಮಿನಲ್ಲೇ ಮಲಗಿದರು.

ಒಂದು ಗಂಟೆಗೆ ಬೇನೆ ಆರಂಭವಾಯಿತು.

ರಾಜಮ್ಮ, ನಾಗೂಬಾಯಿ ಎದ್ದು ಬಂದು, ರತ್ನನ ಸಮೀಪದಲ್ಲಿ ನಿಂತರು.

ಎರಡೂವರೆ ಗಂಟೆಯ ವೇಳೆಗೆ ರತ್ನಾ ಹೆಣ್ಣುಮಗುವೊಂದನ್ನು ಪ್ರಸವಿಸಿದಳು.

ಬೆಳಿಗ್ಗೆ ಬಂದ ವಾರಿಜಾಬಾಯಿ, ಆರೋಗ್ಯವಾಗಿ, ದೃಢಕಾಯವಾಗಿದ್ದ ಮಗುವನ್ನೆತ್ತಿಕೊಂಡು,

" ಈ ಕಂದ—ಒಳ್ಳೆಯ ಪುಣ್ಯವಂತೆ ಕಣ್ರೀ—ತಾಯಿಯನ್ನು ಬದುಕಿಸಿ ಕೊಂಡಳು " ಎಂದಳು.

## ೪೧

ಚಿತ್ರದುರ್ಗದಿಂದ ಬರುತ್ತಿದ್ದ ಸುದ್ದಿಗಳು ಹಿತಕರವಾಗಿರಲಿಲ್ಲ.

ಒಂದು ದಿನ 'ಪ್ರಜಾವಾಣಿ' ಓದುತ್ತಿದ್ದ ರಾಮುಸ್ವಾಮಿಯ ಗಮನವನ್ನು 'ವಾಚಕರ ವಾಣಿ'ಯ ಪತ್ರವೊಂದು ಸೆಳೆಯಿತು.

> "ಇಲ್ಲಿನ ಅಸಿಸ್ಟೆಂಟ್ ಕಮಿಷನರ ಕಛೇರಿಯ ಗುಮಾಸ್ತರೊಬ್ಬರು ಸರ್ವಾಧಿಕಾರಿಗಳಾಗಿ ಬಡಜನರನ್ನು ಪೀಡಿಸುತ್ತಿರುವುದು ಅಧಿಕಾರಿಗಳ ಗಮನಕ್ಕೆ ಬಂದಿದೆಯೇ? ಲಂಚ ತೆರದೆ ಅ. ಕ. ಕಛೇರಿಯಲ್ಲಿ ಯಾವ ಕೆಲಸವೂ ಆಗುವಂತಿಲ್ಲ. ತಮ್ಮ ಗುಮಾಸ್ತರ ದುರ್ನಡತೆಯನ್ನು ಅ. ಕ. ಅವರು ಸಹಿಸಿಕೊಂಡಿರುವುದೇಕೆ? ಅ. ಕ. ಅವರ ತಾಟಸ್ಥ್ಯಧೋರಣೆಯಿಂದ ಅವರಿಗೂ ಈ ದುರಾರ್ಜನೆಯಲ್ಲಿ ಪಾಲು ಇದೆ ಎಂದು ಜನ ಊಹಿಸುತ್ತಿದ್ದಾರೆ. ಸಂಬಂಧಪಟ್ಟ ಅಧಿಕಾರಿಗಳು ಇನ್ನಾದರೂ ಕಣ್ದೆರೆದು ತನಿಖೆ ಕೈಗೊಳ್ಳುವರೇ
>
> —ಒಬ್ಬ ನೊಂದವ."

ರಾಮುಸ್ವಾಮಿಗೆ ದಿಕ್ಕೇ ತೋರದಂತಾಯಿತು.

'ತಂದೆಗೆ ಈ ವಿಷಯ ತಿಳಿಸಿದರೆ ಅವರ ಎದೆ ಒಡೆದುಹೋಗುತ್ತದೆ.' ಎಂದುಕೊಂಡು ಪದ್ಮನಾಭರಾಯರ ಮನೆಗೆ ಬಂದ.

"ಏನು ವಿಶೇಷ ರಾಮು?" ಎಂದವರು ಕೇಳಿದರು.

"ಇವತ್ತಿನ 'ಪ್ರಜಾವಾಣಿ' ನೋಡಿದಿರಾ ಸ್ವಾಮಿ."

"ಇಲ್ಲ—ಏನಿದೆ."

ರಾಮು ತನ್ನ ಕಿಸೆಯಿಂದ ಪತ್ರಿಕೆ ತೆಗೆದು 'ವಾಚಕರ ವಾಣಿ' ತೋರಿಸಿದ.

ರಾಯರು ಅದನ್ನೋದಿಕೊಂಡು,

" ಈ ಗುಮಾಸ್ತ ಯಾರು ಗೊತ್ತೇ ರಾಮು ? "

" ಇಲ್ಲ ಸ್ವಾಮಿ—ನನಗೆ ಗೊತ್ತಿಲ್ಲ. ಈ ಸುದ್ದಿಯಲ್ಲಿ ಸತ್ಯವಿದೆಯೇ ? "

" ಪ್ರಜಾವಾಣಿ ಜವಾಬ್ದಾರಿಯುಳ್ಳ ಪತ್ರಿಕೆ. ಅದರಲ್ಲಿ ನಿರಾಧಾರ ಸುದ್ದಿಗಳು ಬರುವುದಿಲ್ಲ."

" ಸುಬ್ಬೂಗೆ ಆಗದವರು ಬರೆದಿರಬಾರದೇಕೆ ? "

" ಒಬ್ಬ ಅಧಿಕಾರಿಯ ಮೇಲೆ ಲಂಚದ ಆಪಾದನೆ ಹೊರಸುವುದು ಸಾಮಾನ್ಯವಲ್ಲ ರಾಮು."

" ಸುಬ್ಬೂಗೆ ಈ ದುರ್ಬುದ್ಧಿ ಏಕೆ ಹುಟ್ಟಿತು ರಾಯರೇ ? "

" ಏಕೆ ಎಂದು ಹೇಳಲಪ್ಪಾ."

" ಸುಬ್ಬೂನ ರಕ್ಷಿಸುವುದು ಹೇಗೆ ಸ್ವಾಮಿ ? "

" ಆಪಾದನೆ ನಿಜವಾದರೆ ಅವನನ್ನು ರಕ್ಷಿಸಲು ಯಾರಿಗೂ ಸಾಧ್ಯವಿಲ್ಲ."

" ನಾನು ದುರ್ಗಕ್ಕೆ ಹೋಗಿಬರಲೇ ? "

" ನೀನು ಹೋಗಿ ಏನುಮಾಡುತ್ತೀ ? "

" ಸುಬ್ಬೂಗೆ ಎಚ್ಚರಿಕೆಯನ್ನಾದರೂ ಕೊಟ್ಟುಬರುತ್ತೇನೆ."

" ಅದರಿಂದ ಯಾವ ಪ್ರಯೋಜನವೂ ಇಲ್ಲ. ವಿನಾಕಾರಣ ನೀನು ಸುಬ್ಬೂ ಆಗ್ರಹಕ್ಕೆ ಪಾತ್ರನಾಗುತ್ತೀ."

" ಸುಬ್ಬೂ ಕಷ್ಟಕ್ಕೆ ಸಿಕ್ಕಿಕೊಂಡಿರುವಾಗ ನೋಡಿಕೊಂಡು ಕುಳಿತಿರುವುದೇ ಸ್ವಾಮಿ—ಕಾಗದ ಬರೆಯಲೇ ? "

ರಾಯರು ಯೋಚಿಸಿ,

" ನೀನು ಬರೆಯಬೇಡ—ನಾನು ಬರೆಯುತ್ತೇನೆ ಸುಮ್ಮನಿರು " ಎಂದರು.

ಅಂದೇ ರಾಯರು ಕಾಗದವನ್ನೂ ಬರೆದರು.

ರಾಯರ ಕಾಗದ ಸುಬ್ಬುಕೃಷ್ಣನ ಕೈ ಮುಟ್ಟುವುದರೊಳಗಾಗಿ ಆಗಬಾರದುದು ಆಗಿಯೇ ಹೋಗಿತ್ತು— ಲಂಚ ನಿರೋಧ ಶಾಖೆಯವರು (Anti-Corruption Department) ಸುಬ್ಬುಕೃಷ್ಣ, ಕಾಳಪ್ಪ, ವೆಂಕೋಬರಾಯ

ಮೂವರನ್ನು ಹಿಡಿದಿದ್ದರು. ಮೂವರ ಮೇಲೆ ಸಸ್ಪೆನ್‌ಷನ್ (Suspension) ಆಜ್ಞೆ ಹೊರಟಿತು.

ಆ ಸುದ್ದಿ ಕೇಳಿದ ಯೋಗಾನರಸಿಂಹಯ್ಯನವರೂ, ಕಮಲಾಕ್ಷಮ್ಮನವರೂ ಭೂಮಿಗಿಳಿದುಹೋದರು.

ಎರಡು ದಿನಗಳು ಕಳೆದವು.

ಮೂರನೆಯ ದಿನ ಬೆಳಿಗ್ಗೆ ರಾಮು ಹಲ್ಲುಜ್ಜಲು, ಟೂತ್ ಬ್ರಷ್ ಮೇಲೆ ಡೆಂಟಲ್ ಕ್ರೀಮ್ ಲೇಪಿಸುತ್ತ ನಿಂತಿದ್ದ.

ಒಂದು ಟ್ಯಾಕ್ಸಿ ಬಂದು ನಿಂತಿತು.

ಸುಬ್ಬು ಟಾಕ್ಸಿಯಿಂದಿಳಿದುಬರಲು, ರಾಮು ಒಳಗೆ ಹೋಗಿ ತಾಯಿಗೆ ಸುದ್ದಿ ಮುಟ್ಟಿಸಿದ.

ಕಮಲಾಕ್ಷಮ್ಮನವರು ಹೊರಗೆ ಬಂದು ಮಗನನ್ನು ಸ್ವಾಗತಿಸಿದರು.

ದಂತಧಾವನ ಮುಗಿಸಿಕೊಂಡು ಬಂದ ರಾಮು,

" ಈಗ ಬಂದೆಯಾ ಸುಬ್ಬೂ " ಎಂದ.

" ಹೂ—ಅಣ್ಣ ಎಲ್ಲಿ ? "

" ಆನೇಕಲ್ಲಿಗೆ ಹೋಗಿದ್ದಾನೆ."

" ಏಕೆ ? "

" ಸೀತಾ ಬಾ ಎಂದು ಬರೆದಿದ್ದಳು."

ಕಮಲಾಕ್ಷಮ್ಮ ಕಾಫಿ ತರಲು ಒಳಗೆ ಹೋಗಲು ರಾಮು ಮೆಲ್ಲನೆ,

" ಪದ್ಮನಾಭರಾಯರು ಬರೆದ ಕಾಗದ ಕೈಸೇರಿತೇ ಸುಬ್ಬೂ."

" ಕೈಸೇರಿತು."

" ಇಷ್ಟಕ್ಕೇಕೆ ಅವಕಾಶಕೊಟ್ಟೆ."

" ನಾನೇನು ಮಾಡಲಿ. ಗುಮಾಸ್ತನ ತಪ್ಪಿಗೆ ನನಗೆ ಶಿಕ್ಷೆಯೇ ? "

" ಮುಂದೇನು ಮಾಡುತ್ತೀ ? "

" ಇವತ್ತು ಚೀಫ್ ಸೆಕ್ರೆಟರಿಗಳನ್ನೂ ರೆವಿನ್ಯೂ ಮಂತ್ರಿಗಳನ್ನೂ ಕಂಡು ಬರುತ್ತೇನೆ."

ಕಾಫಿ ತೆಗೆದುಕೊಂಡುಬಂದು ಇಬ್ಬರು ಮಕ್ಕಳಿಗೂ ಕೊಟ್ಟು ಕಮಲಾಕ್ಷಮ್ಮನವರು,

" ಶಾರದಾ ಎಲ್ಲಿ " ಎಂದು ಕೇಳಿದರು.

" ಅವಳನ್ನು ಮೈಸೂರಿನಲ್ಲಿ ಬಿಟ್ಟು ಬಂದೆ."

" ಏಕೆ—ಇಲ್ಲಿಗೇ ಕರೆದುಕೊಂಡು ಬರಬೇಕಾಗಿತ್ತು."

" ಹೋದರೆ ಹೋಗಲಿ—ಅವಳಿಂದಲೇ ಇಷ್ಟು ಆದುದು."

" ಏನೋ ಹೀಗನ್ನುತ್ತೀ ? "

" ಹೌದಮ್ಮ—ನನ್ನ ಗುಮಾಸ್ತನಿಗೆ ಹೇಳಿ ಬೇಕುಬೇಕಾದುದನ್ನೆಲ್ಲಾ ತರಿಸಿಕೊಳ್ಳುತ್ತಿದ್ದಳು "

ಎಂದೆದ್ದು,

" ಸ್ನಾನಮಾಡಿಕೊಂಡು—ನಾನು ಹೊರಗೆ ಹೋಗಿ ಬರುತ್ತೇನಮ್ಮ. ಮೊದಲು ನನ್ನ ಲಾಯರನ್ನು ನೋಡಬೇಕಾಗಿದೆ " ಎಂದ.

ಸಂಜೆ ಅಣ್ಣನನ್ನು ಕಾಣುವುದಕ್ಕಾಗಿಯೇ ರಾಮಸ್ವಾಮಿ ಮನೆಗೆ ಬೇಗ ಬಂದ.

ಎಂಟು ಗಂಟೆಗೆ ಮನೆಗೆ ಬಂದ ಸುಬ್ಬುಕೃಷ್ಣ, ನಿರ್ವಿಣ್ಣನಾಗಿ ಕುರ್ಚಿಯ ಮೇಲೆ ದೊಪ್ಪನೆ ಕುಕ್ಕರಿಸಿದ.

" ಏನಾಯಿತು ಸುಬ್ಬೂ..........."

" ಮಂತ್ರಿಗಳು ಇಂಟರ್‌ವ್ಯೂ (Interview) ನಿರಾಕರಿಸಿದರು."

" ಚೀಫ್ ಸೆಕ್ರೆಟರಿ..........."

" ಕೇಸ್ ಆ್ಯಂಟಿ–ಕರ್‌ಪ್‌ಷನ್ ಅವರ ಕೈಯಲ್ಲಿರುವುದರಿಂದ ತಾವೇನೂ ಮಾಡಲಾಗುವುದಿಲ್ಲ ಎಂದರು."

" ಮುಂದೆ..............."

" ರಿಟ್ ಪಿಟಿಷನ್ ಹಾಕಲು ಲಾಯರಿಗೆ ಹೇಳಿ ಬಂದಿದ್ದೇನೆ."

" ಕೋರ್ಟಿನಲ್ಲಿ ಏನಾಗಬಹುದು ಸುಬ್ಬೂ."

" ಹೇಗೆ ಹೇಳಲಿ—ಚಾನ್ಸ್‌ಸ್ (Chances) ಇದೆ ಎಂದು ಲಾಯರು ಹೇಳುತ್ತಿದ್ದಾರೆ."

" ಲಾಯರ್ ಯಾರು ? "

" ಗೋವಿಂದರಾಯರು."

" ಅವರು ಘಟ್ಟಿಗರು — ಸರ್ಕಾರದ ಮೇಲೆ ಹತ್ತಾರು ರಿಟ್‌ಗಳನ್ನು ಗೆದ್ದಿದ್ದಾರೆ."

" ಫೀಸ್ ಹೆಚ್ಚು."

" ಎಷ್ಟು ಕೇಳಿದರು ? "

" ಐದು ಸಾವಿರ—ಎರಡು ಸಾವಿರ ಮುಂಗಡವಾಗಿ ಕೊಟ್ಟೆ."

" ಎಷ್ಟು ಖರ್ಚಾದರೂ ಚಿಂತೆಯಿಲ್ಲ ಸುಬ್ಬೂ-ನೀನು ಕೇಸ್ ಗೆಲ್ಲುವುದು ಮುಖ್ಯ."

ಸುಬ್ಬುಕೃಷ್ಣ ಇದ್ದಕ್ಕಿದ್ದಂತೆ ಮುಖ ಮುಚ್ಚಿಕೊಂಡು ಅಳಲಾರಂಭಿಸಿದ.

ಕಮಲಾಕ್ಷಮ್ಮ ಅವನ ಬಳಿಗೆ ಬಂದು, ಕುತ್ತಿಗೆಯಪ್ಪಿದರು.

" ಅಮ್ಮಾ—ನಾನು ಪಾಪಿ—ನಿಮ್ಮನ್ನೆಲ್ಲಾ ನೋಯಿಸಿದೆ."

" ನನ್ನ ಮಕ್ಕಳು ಯಾರೂ ಪಾಪಿಗಳಲ್ಲ "

ಎಂದು ಕಮಲಾಕ್ಷಮ್ಮನವರು ನುಡಿದರು.

## ೪೨

ಕೋರ್ಟುಗಳಿಗೆ ಬೇಸಿಗೆ ರಜಾ ಬಂದಿತು.

ಸುಬ್ಬುಕೃಷ್ಣನ ರಿಟ್ ಪಿಟಿಷನ್ ಮುಂದಕ್ಕೆ ಹೋಯಿತು.

ಅವನಿಗೆ ಒಂದು ಬಗೆಯ ಮಂಕು ಕವಿಯಿತು. ಎಲ್ಲಿಗೂ ಹೋಗಲೂ ಇಷ್ಟವಿಲ್ಲ; ಯಾರನ್ನು ಮಾತನಾಡಿಸಲೂ ಮನಸ್ಸಿಲ್ಲ; ಯಾವ ಕೆಲಸ ಮಾಡಲೂ ಉತ್ಸಾಹವಿಲ್ಲ.

ಪ್ರತಿದಿನವೂ ಅವನಿಗೆ ಮೈಸೂರಿನಿಂದ ಕಾಗದಗಳು ಬರುತ್ತಿದ್ದವು.

ಲಕೋಟೆಯ ಮೇಲಿದ್ದ ಅಕ್ಷರ ಕಂಡೊಡನೆಯೇ ಸುಬ್ಬುಕೃಷ್ಣ ಕಾಗದ ವನ್ನೊಡೆಯದೆ ಹರಿದು ಬಿಸುಡುತ್ತಿದ್ದ.

ಲಾಲ್‌ಬಾಗ್ ಅವನ ಮನೆಯಾಯಿತು.

ಬೆಳಿಗ್ಗೆ--ಸಂಜೆ ಗಂಟೆಗಟ್ಟಳೆ ಲಾಲ್‌ಬಾಗ್‌ನಲ್ಲಿ ಹೋಗಿ ಕೂಡುವನು.

ಅವನು ಅನುಭವಿಸುತ್ತಿದ್ದ ವೇದನೆ ಕಂಡು ಕಮಲಾಕ್ಷಮ್ಮ ಮಮ್ಮಲ ಮರುಗಿದರು.

ನಾನಾವಿಧದಲ್ಲಿ ಮಗನನ್ನು ಸಂತೈಸಲೆತ್ನಿಸಿದರು.

"ಸುಬ್ಬೂ—ಸುಮ್ಮನೆ ಕೊರಗಿ ಏನು ಪ್ರಯೋಜನಾಪ್ಪ ?"

"ಇನ್ನು ೩–೪ ವರ್ಷಗಳಲ್ಲಿ ನಾನು ಡೆಪ್ಯುಟಿ ಕಮಿಷನರ್ ಆಗುತ್ತಿದ್ದೇಮ್ಮ."

"ನಿರಾಶೆಗೊಳ್ಳಬೇಡ—ಕೋರ್ಟಿನಲ್ಲಿ ಏನು ಇತ್ಯರ್ಥವಾಗತ್ತೆ ನೋಡೋಣ."

"ಏನಾದರೇನಮ್ಮ ಪ್ರಯೋಜನ. ಜನ್ಮಕ್ಕೆ ಕೆಟ್ಟ ಹೆಸರು ಅಂಟಿ ಕೊಂಡಿತು. ಸರೀಕರೆದುರಿಗೆ ನಾನು ಮುಖವೆತ್ತಿಕೊಂಡು ಹೇಗೆ ತಿರುಗಲಿ ?"

“ ಮನುಷ್ಯನಾಗಿ ಹುಟ್ಟಿದ ಮೇಲೆ ಕಷ್ಟವೂ ಬರತ್ತೆ, ಸುಖವೂ ಬರತ್ತೆ. ಎರಡನ್ನೂ ಧೈರ್ಯವಾಗಿ ಎದುರಿಸಬೇಕಪ್ಪಾ.”

“ ........................................................................ ”

“ ಸುಬ್ಬೂ........”

“ ಏನಮ್ಮಾ ? ”

“ ಶಾರದನಿಗೆ ಕಾಗದ ಬರೆದು ಹಾಕೋ—ಅವಳು ಬಂದು ಇಲ್ಲೇ ಇರಲಿ.”

ದೂರ್ವಾಸಾವತಾರ ತಾಳಿದ ಸುಬ್ಬುಕೃಷ್ಣ,

“ ಅವಳ ಹೆಸರು ಎತ್ತಬೇಡಮ್ಮ,” ಎಂದ.

“ ನೀನು ಆಡುತ್ತಿರುವುದು ಬಲು ಚೆನ್ನಾಗಿದೆಯಪ್ಪ.—ಇನ್ನು ಶಾರದನನ್ನು ನೀನು ನೋಡುವುದೇ ಇಲ್ಲವೇ ? ”

“ ಇಲ್ಲ.”

“ ನಾನು ಮೈಸೂರಿಗೆ ಹೋಗಿ ಅವಳನ್ನು ಕರೆದುಕೊಂಡು ಬರ್ತೀನಪ್ಪಾ.”

“ ನೀನು ಅವಳನ್ನು ಇಲ್ಲಿಗೆ ಕರೆದುಕೊಂಡು ಬಂದರೆ ನಾನು ಮನೆಬಿಟ್ಟು ಹೊರಟುಹೋಗುತ್ತೇನೆ.”

ವಿಧಿಯಿಲ್ಲದೆ ಕಮಲಾಕ್ಷಮ್ಮನವರು ಸುಮ್ಮನಾಗಬೇಕಾಯಿತು.

ನಿಯತವೇಳೆಗೆ ಸರಿಯಾಗಿ ರಾಮಸ್ವಾಮಿ ಹೌಸಿಂಗ್ ಬೋರ್ಡಿನವರ ಕಾಂಟ್ರ್ಯಾಕ್ಟ್ ಮುಗಿಸಿದ್ದ. ಶಾಮಸುಂದರ್ ಅವರು ಸಂತುಷ್ಟರಾದರು.

ಒಂದು ದಿನ ಸಂಜೆ ಕಂಪೆನಿಯ ಕಾರಿನಲ್ಲಿ ಮನೆಗೆ ಬಂದ ರಾಮಸ್ವಾಮಿ,

“ ಅಮ್ಮ, ಸುಬ್ಬು ಎಲ್ಲಿ ? ” ಎಂದು ಕೇಳಿದ.

“ ಆಗಲೇ ಎಲ್ಲೋ ಹೋದನಪ್ಪ.”

“ ಏಳಮ್ಮಾ—ನನ್ನ ಜತೆ ಬಾ.”

“ ಎಲ್ಲೀಗೋ ? ”

“ ಬಾ—ನಿನಗೇ ಗೊತ್ತಾಗತ್ತೆ.”

ಕಮಲಾಕ್ಷಮ್ಮ ಇದ್ದಂತೆಯೇ ಹೊರಟು ನಿಲ್ಲಲು,

“ ಹೊಸಸೀರೆ ಉಟ್ಟುಕೊಳ್ಳಮ್ಮ—ಏನಿದು ಗುಡ್ಡೆ.”

" ನಾನೇನು ಚಿಕ್ಕಪುಟ್ಟ ಹುಡುಗಿಯೇ ರಾಮು."

" ಪಂಚಾಯಿತಿ ಮಾಡದೆ ನೀನು ಒಂದು ಕೆಲಸವನ್ನೂ ಮಾಡುವುದಿಲ್ಲವೋ ? ದೊಡ್ಡವರು ಚಿಕ್ಕವರ ಮಾತು ಕೇಳಬೇಕು."

" ಹಾಗೇ ಆಗಲಪ್ಪಾ "

ಎಂದು ನಗುತ್ತಾ ಕಮಲಾಕ್ಷಮ್ಮ ಹೊಸ ಸೀರೆ ಧರಿಸಿ ಬಂದರು.

ರಾಮು ಅವರನ್ನು ಕರೆದುಕೊಂಡು ನಾಗೂಬಾಯಿಯವರ. ಮನೆಗೆ ಬಂದು,

" ಏಳಿ, ಚಿಕ್ಕಮ್ಮ " ಎಂದ.

" ಎಲ್ಲಿಗೆ ಕಮಲಾಕ್ಷಮ್ಮ."

" ಈ ಹುಡುಗನ ಆಟ ಒಂದೂ ನನಗೆ ಅರ್ಥವೇ ಆಗುತ್ತಿಲ್ಲ ನಾಗೂಬಾಯಿ. ನೋಡಿ—ನನಗೆ ಹೊಸಸೀರೆ ಉಡಿಸಿ ಕರೆದುಕೊಂಡುಬಂದಿದ್ದಾನೆ."

" ಚಿಕ್ಕಮ್ಮ—ನೀವೂ ಹೊಸಸೀರೆ ಉಟ್ಟುಕೊಳ್ಳಿ."

ನಾಗೂಬಾಯಿ ನಗುತ್ತ ಒಳಗೆ ಹೋಗಿ ಹೊಸಸೀರೆ ಉಟ್ಟುಕೊಂಡು ಬಂದರು.

ಅವರಿಬ್ಬರೊಂದಿಗೆ ರಾಮುಸ್ವಾಮಿ ಬಂದು ಕಾರಿನಲ್ಲಿ ಕುಳಿತ.

ಕಾರು ' ಜಯನಗರ 'ದತ್ತ ಧಾವಿಸಿತು.

ಬೀಗ ಹಾಕಿದ ಒಂದು ಹೊಸಮನೆಯ ಮುಂದೆ ನಿಲ್ಲಲು, ರಾಮು ಕಾರಿನಿಂದ ಇಳಿದು,

" ಬನ್ನಿ " ಎಂದ.

ರಾಮುವೇ ಹೊಸಮನೆಯ ಬಾಗಿಲು ತೆಗೆದು ಕಮಲಾಕ್ಷಮ್ಮ, ನಾಗೂಬಾಯಿಯವರನ್ನು ಒಳಗೆ ಕರೆದೊಯ್ದ.

" ನೀನು ಮೊನ್ನೆ ಕಟ್ಟಿಸಿದ ಮನೆ ಇದೇನೇ ರಾಮು."

" ಹೌದಮ್ಮ."

" ಬಲು ಚೆನ್ನಾಗಿದೆಯಲ್ಲೋ "

ಮನೆಯ ಎಡಗಡೆ ವೆರಾಂಡ ; ಬಲಗಡೆ ರೂಮು. ಒಳಗೆ ಪ್ರವೇಶಿಸಿದರೆ ಹಜಾರ—ಅದರ ಎದುರು ರೂಮು. ಹಜಾರದ ಒಳಗಿದ್ದುದೇ ಅಡಿಗೆಯಮನೆ—

ಊಟದ ಮನೆ-ಮತ್ತೊಂದು ರೂಮು. ಅಡಿಗೆಯ ಮನೆಯ ಪಕ್ಕದಲ್ಲಿ ಸ್ನಾನ ಗೃಹ-ಅದರ ಎದುರು ಸೌದೆ ಬೆರಣಿಯ ಉಗ್ರಾಣ.

ಕಿಟಕಿಯಾಚೆ ಕಾಣುತ್ತಿದ್ದ ಮನೆಗಳನ್ನು ನೋಡಿ ನಾಗೂಬಾಯಿ,

" ಇವುಗಳನ್ನೆಲ್ಲಾ ನೀನು ಕಟ್ಟಿಸಿದೆ ಎಂದು ನಂಬುವದಕ್ಕೇ ಆಗುವುದಿಲ್ಲ ರಾಮು."

" ಏಕೆ ಚಿಕ್ಕಮ್ಮ—ನಿಮ್ಮ ರಾಮು ಅಂಥ ದಡ್ಡನೇ ? "

" ಅಲ್ಲಪ್ಪ. ತಾನು ಎತ್ತಿ ಆಡಿಸಿದ ಮಗು, ಬೆಳೆದು ದೊಡ್ಡವನಾದ ಎಂದು ನಂಬಲು ಯಾವ ತಾಯಿಗೂ ಕಷ್ಟವೇ !—ರಾಮು, ನೀನು ಇಂಥ ಒಂದು ಮನೆ ಮಾಡಿಕೊಂಡದ್ದನ್ನು ನಾನು ನೋಡಬೇಕು ಕಣೋ."

" ಚಿಕ್ಕಮ್ಮ—ಈ ಮನೆ ಯಾರದು ಗೊತ್ತೇ ? "

" ಯಾರದು ? "

" ರಿಟೈರ್ಡ್ ಅಮಲ್ದಾರರು ಘ|| ರಾ|| ಯೋಗಾನರಸಿಂಹಯ್ಯ ಮತ್ತು ಅವರ ಧರ್ಮಪತ್ನಿ ಮಾ|| ಶ್ರೀ|| ಕಮಲಾಕ್ಷಮ್ಮನವರದು ! "

" ರಾಮೂ.............................. "

" ಹೌದಮ್ಮ—ನಿಜ. ಇದು ನಿನ್ನ ಮನೆ."

" ರಾಮು ಆಟ ನೋಡಿದಿರಾ ನಾಗೂಬಾಯಿ."

" ಹೆತ್ತ ಒಡಲಿಗೆ ಹಾಲುಹುಯ್ಯುವ ಮಗ ಕಣಮ್ಮ—ನಮ್ಮ ರಾಮು."

" ಅಮ್ಮ—ಗೃಹಪ್ರವೇಶ ಎಂದು ಇಟ್ಟುಕೊಳ್ಳೋಣ."

" ಜೋಯಿಸರನ್ನು ಕೇಳೋಣ — ರತ್ನನ್ನ, ಸೀತೂನ ಕರೆಸಿಕೊಳ್ಳ ಬೇಕು—"

" ಅತ್ತಿಗೆಮ್ಮನನ್ನೂ ಕರೆಸಿಕೊಳ್ಳಬೇಕು."

" ಸಿಮ್ಮಣ್ಣ ಮುರಾಡ ಹಾಕಿಕೊಂಡು ಕುಳಿತಿದ್ದಾನಲ್ಲಪ್ಪ."

" ನಾನು ಹೋಗಿ ಅತ್ತಿಗೆಮ್ಮನನ್ನು ಕರೆದುಕೊಂಡು ಬರುತ್ತೇನೆ."

" ಸುಬ್ಬಾ ಮನೆಬಿಟ್ಟು ಹೋದರೆ............... "

" ಎಲ್ಲಿಗೆ ಹೋಗುತ್ತಾನೆ—ನಾನು ನೋಡುತ್ತೇನೆ."

" ಸುಬ್ಬೂ ಮನಸ್ಸಿಗೆ ವಿರೋಧವಾಗಿ ಈಗ ಹೋಗುವುದು ಬೇಡ ರಾಮು–ಅವನ ಕೇಸ್ ಏನಾಗತ್ತೆ ನೋಡಿಕೊಂಡು ಶಾರದೆಯನ್ನು ಕರೆಸುವ ವಿಷಯ ಯೋಚಿಸೋಣ."

" ಅಮ್ಮ ಹೇಳಿದ್ದು ಸರಿ ರಾಮು—ಸುಬ್ಬೂ ಮನಸ್ಸಿಗೆ ಬೇಸರವಾಗುವ ಯಾವ ಕೆಲಸವನ್ನೂ ಈಗ ಮಾಡುವುದು ಬೇಡ "

ಎಂದು ನಾಗೂಬಾಯಿ ದನಿಗೂಡಿಸಿದರು.

## ೪೩

ಹದಿನೈದು ದಿನಗಳಾದನಂತರ ಒಂದು ಲಗ್ನ ನಿಶ್ಚಯಿಸಿ 'ಗೃಹ ಪ್ರವೇಶ'ಕ್ಕೆ ಬರಲು ಯೋಗಾನರಸಿಂಹಯ್ಯ ಎಲ್ಲರಿಗೂ ಪತ್ರ ಬರೆದರು.

ಶ್ರೀನಿವಾಸಮೂರ್ತಿ, ಸೀತಾ, ರತ್ನಾ, ರಾಜಮ್ಮನವರು ನಾಲ್ಕು ದಿನಗಳು ಮುಂಚಿತವಾಗಿಯೇ ಬಂದರು.

ಅಣ್ಣನನ್ನು ನೋಡಿ ಸೀತಾ ಸಂತೋಷ ವ್ಯಕ್ತಪಡಿಸಿದಳು.

ಮನೆಯಲ್ಲಿ ಯಾರೂ ಶಾರದೆಯ ಹೆಸರೆತ್ತಕೂಡದೆಂದು ಕಮಲಾಕ್ಷಮ್ಮ ಕಟ್ಟಾಜ್ಞೆ ವಿಧಿಸಿದ್ದರು.

ರತ್ನಾಕರ, ಶಾಮಲೆಯ ಬಗ್ಗೆ ಸುಬ್ಬುಕೃಷ್ಣ ಆಸಕ್ತಿ ತೋರಿದ.

ಪುಟ್ಟ ಶಾಮಲೆ ದೊಡ್ಡಪ್ಪನ ತಲೆಗೂದಲು ಹಿಡಿದು ಜಗ್ಗಿಸುತ್ತಿದ್ದಳು. ರತ್ನಾಕರ ಸೋದರಮಾವನ ಮುಖವನ್ನೆಲ್ಲಾ ಕಚ್ಚಿದ್ದ.

ಮಕ್ಕಳ ನಿಷ್ಕಲ್ಮಷ ನಗೆ ಸುಬ್ಬುಕೃಷ್ಣನ ಹೃದಯ ಬೆಳಗಿಸಿ, ಮನಸ್ಸಿನ ಮುಜುಗರ ಪರಿಹರಿಸಿತ್ತು.

ಮಕ್ಕಳೊಂದಿಗೆ ಮಗುವಾಗಿ ಅವನು ಆಡುತ್ತಿದ್ದುದನ್ನು ನೋಡಿದ ನಾಗೂಬಾಯಿ, ಒಳಗೆ ಬಂದು,

"ಕಮಲಾಕ್ಷಮ್ಮ—ಇಲ್ಲಿ ಸ್ವಲ್ಪ ಬನ್ನಿ"

ಎಂದು ಕರೆದುಕೊಂಡು ಹೋಗಿ ಆ ದೃಶ್ಯ ತೋರಿಸಿ,

"ನಿಮ್ಮ ಮೊಮ್ಮಕ್ಕಳು ಮನೆಗೆ ಬಂದುದು–ಸುಬ್ಬೂ ಮಂಕು ಹರಿಯಿತು ಕಣ್ರೀ—"

"ನಿಮ್ಮ ಬಾಯಿ ಹರಕೆಯಿಂದ ಅವನು ಮೊದಲಿನ ಸ್ಥಿತಿಗೆ ಬಂದರೆ ಸಾಕು—ನಾಗೂಬಾಯಿ."

" ಕೆಲಸ ಮತ್ತೆ ಸಿಕ್ಕುತ್ತದೆಯೇ ? "

" ನೋಡಬೇಕು—ಕೋರ್ಟು ಬಾಗಿಲು ತೆಗೆದಮೇಲೆ ಗೊತ್ತಾಗುತ್ತದೆ."

ನಾಗೂಬಾಯಿ ವಿಷಣ್ಣವದನರಾಗಿ,

" ನೀವು ದೂರ ಹೋಗಿಬಿಡುತ್ತೀರಿ " ಎಂದರು.

" ಮನೆ ದೂರವಾದರೆ—ಮನಸ್ಸು ದೂರವೇ ನಾಗೂಬಾಯಿ."

" ಇಲ್ಲ-ದಿನಕ್ಕೊಮ್ಮೆಯಾದರೂ ನಿಮ್ಮನ್ನು ನೋಡದಿದ್ದರೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಮೊದಲಿನ ಹಾಗೆ ದೇಹದಲ್ಲಿ ತ್ರಾಣವಿಲ್ಲ ಕಮಲಾಕ್ಷಮ್ಮ—ಜಯನಗರದವರೆಗೆ ನಡೆಯುವುದು........"

" ನಾನೇ ಬರುತ್ತೇನೆ."

" ಈ ತುಂಬಿದ ಮನೆಯಲ್ಲಿ ಶಾರದಾ ಇಲ್ಲದಿರುವುದು 'ಬಿಕೋ' ಎನ್ನುತದ್ರೀ—ಎಷ್ಟಾದರೂ ಅದು ನಮ್ಮ ಮನೆ ಹುಡುಗಿ."

" ಯಾರು ಅಲ್ಲಾಂದ್ರಮ್ಮ. ಅವಳು ಇದ್ದಿದ್ದರೆ ರತ್ನನಿಗೂ ಜತೆಯಾಗುತ್ತಿತ್ತು."

" ಶಾರದನ ತಂದೆ ಪ್ರತಿದಿನವೂ ನಮ್ಮ ಮನೆಯವರಿಗೆ ಕಾಗದ ಬರೆಯುತ್ತಿದ್ದಾರೆ. ಶಾರದಾ ಒಂದೇ ಸಮನೆ ಗೋಳಾಡುತ್ತಿದ್ದಾಳಂತೆ ! "

" ಕಂಡವರ ಮನೆ ಹೆಣ್ಣುಮಕ್ಕಳನ್ನು ಅಯ್ಯೋ ಎನ್ನಿಸಬಾರದ್ರೀ."

" ಹೌದಮ್ಮ. ನಾನೇನು ಮಾಡಲಿ ಹೇಳಿ. ಸುಬ್ಬೂ ಹಟ ಹಿಡಿದಿದ್ದಾನಲ್ಲಾ ! "

ನಾಗೂಬಾಯಿ ಮಾತು ಬದಲಿಸಲಿಚ್ಛಿಸಿ,

" ಹೊಸಮನೆಗೆ ಸಾಮಾನು ಯಾವಾಗ ಸಾಗಿಸುತ್ತೀರಿ."

" ನಾಳೆ ಎರಡು ಲಾರಿ ಬರತ್ತೆ ಎಂದು ರಾಮು ಹೇಳಿದ್ದಾನೆ. ಒಂದೇ ಸಲ ಸಾಮಾನು ಸಾಗಿಸಿ, ನಾವೂ ಅವುಗಳ ಜತೆ ಹೋಗುತ್ತೇವೆ. ನೀವು....? "

" ನಾನೂ ನಿಮ್ಮ ಜತೆಯಲ್ಲೇ ಬರುತ್ತೇನೆ " ಎಂದರು.

ಕಂಪೆನಿಯ ಲಾರಿಗಳಲ್ಲಿ ಸಾಮಾನುಗಳನ್ನು ಭರ್ತಿಮಾಡಿ ಹೊಸಮನೆಗೆ ಸಾಗಿಸಲಾಯಿತು. ಎರಡು ಕಾರುಗಳಲ್ಲಿ ಮನೆಯವರೆಲ್ಲರೂ 'ಜಯನಗರ' ಸೇರಿದರು.

ಹಸೆಯ ಮೇಲೆ ರಾಮಸ್ವಾಮಿ, ರತ್ನಾ ಕುಳಿತುಕೊಂಡು ಹೋಮ, ಹವನ, ಶಾಂತಿ ನೆರವೇರಿಸಲೆಂದು ಕಮಲಾಕ್ಷಮ್ಮನವರ ಆಸೆ.

ತಂದೆ, ತಾಯಿ ಹಸೆಯ ಮೇಲೆ ಕೂಡಲಿ ಎಂದು ರಾಮಸ್ವಾಮಿ ಹಟ. ನಾಗೂಬಾಯಿಯವರೇ ಮಧ್ಯಸ್ಥಿಕೆ ಮಾಡಬೇಕಾಯಿತು.

" ರಾಮು ಯೋಚನೆ ಸರಿಯಾಗಿದೆ ಕಮಲಾಕ್ಷಮ್ಮ. ಅವನು ಹೇಳಿದಂತೆ ಮಾಡಿ " ಎಂದರು.

ಶಾಸ್ತ್ರವಿಧಿಗಳೆಲ್ಲಾ ವಿಧ್ಯುಕ್ತವಾಗಿ ನೆರವೇರಿದವು.

ಮನೆ ಕಟ್ಟಿದ ಕೂಲಿಗಳಿಗೆ, ಮೇಸ್ತ್ರಿಗಳಿಗೆ ರಾಮು ಮೃಷ್ಟಾನ್ನಭೋಜನ ಮಾಡಿಸಿದ.

ಎರಡು ದಿನಗಳಾದನಂತರ ಊರಿಗೆ ಹಿಂದಿರುಗಲು ಶ್ರೀನಿವಾಸಮೂರ್ತಿ ಚಡಪಡಿಸಿದ.

" ಇರು ಮೂರ್ತಿ—ಏನವಸರ—ಹೇಗೂ ಸ್ಕೂಲಿಗೆ ರಜಾ ಇದೆ."

" ಎಕ್ಸಾಮಿನೇರ್ಷ ಪೇಪರ್ಸ್ ಕರೆಕ್ಟ್ ಮಾಡಬೇಕು ರಾಮು."

" ಇಲ್ಲೇ ಮಾಡಿದರಾಗದೆ ? "

" ಇಲ್ಲಿದ್ದರೆ ಕೆಲಸ ಮಾಡಬೇಕು ಅನ್ನಿಸಲ್ಲ ರಾಮು—ಎಲ್ಲರ ಜತೆ ಹಾಯಾಗಿ ಹರಟೆ ಹೊಡೆಯುತ್ತ ಇರಬೇಕು ಎನಿಸುತ್ತದೆ. ಈಗ ಊರಿಗೆ ಹೋಗಲು ಅನುಮತಿ ಕೊಡು. ಮುಂದಿನ ತಿಂಗಳು ಬರುತ್ತೇನೆ."

" ಸೀತಾ........"

" ಅವಳನ್ನೂ ಕರೆದುಕೊಂಡು ಹೋಗುತ್ತೇನೆ."

ರಾಮು ಒಪ್ಪಿಕೊಳ್ಳಬೇಕಾಯಿತು.

ಮಾರನೆಯ ದಿನ ಶ್ರೀನಿವಾಸಮೂರ್ತಿ ಹೆಂಡತಿಯನ್ನೂ ಮಗುವನ್ನೂ ಕರೆದುಕೊಂಡು ಆನೇಕಲ್ಲಿಗೆ ಪ್ರಯಾಣ ಬೆಳಸಿದ.

# ೪೪

ಶಾಮಸುಂದರ್ ಅವರು ಒಂದು ‘ ಸಾರ್ವಜನಿಕ ಹಾಸ್ಟಲ್ ’ ಕಟ್ಟಡದ ಕೆಲಸವನ್ನು ರಾಮಸ್ವಾಮಿಗೆ ವಹಿಸಿದರು.

ಕೋರ್ಟಿನ ರಜಾ ಮುಗಿದು, ಕೋರ್ಟು ಬಾಗಿಲು ತೆರೆಯಲ್ಪಟ್ಟಿತು.

ಸುಬ್ಬುಕೃಷ್ಣನ ಕೇಸ್ ‘ ಹಿಯರಿಂಗಿ ’ಗೆ (Hearing) ಬಂದಿತು.

ರಿಟ್ ಲಾಯರೆಂದು ಪ್ರಸಿದ್ಧರಾಗಿದ್ದ ಗೋವಿಂದರಾಯರು ತಮ್ಮ ಕಕ್ಷಿಗಾರನ ಪರ ವಹಿಸಿ ವಾದಮಾಡಿದರು. ಅಡ್ವೊಕೇಟ್ ಜನರಲ್ ಅವರು ಸರ್ಕಾರದ ಪರ ವಾದಿಸಿದರು.

ಇಬ್ಬರು ನ್ಯಾಯಮೂರ್ತಿಗಳು ಇಬ್ಬರ ವಾದವನ್ನು ಶಾಂತಿಯಿಂದ ಲಾಲಿಸಿ, ಮೂರನೆಯ ದಿನ ಜಡ್ಜ್‌ಮೆಂಟ್ ಕೊಡುವುದಾಗಿ ತಿಳಿಸಿದರು.

ಅಡಿಗೆಯ ಕೆಲಸವನ್ನು ಕಮಲಾಕ್ಷಮ್ಮ ರತ್ನನಿಗೆ ವಹಿಸಿ, ದೇವರಮನೆ ಸೇರಿಬಿಟ್ಟರು.

‘ ಮಗನಿಗೆ ಒಳ್ಳೆಯದು ಮಾಡು ಸ್ವಾಮಿ ’

ಎಂದು ಅವರ ಹೃದಯ ಮೊರೆಯಿತು.

ಜಡ್ಜ್‌ಮೆಂಟ್ ಕೇಳಿಕೊಂಡು ಸುಬ್ಬುಕೃಷ್ಣ ಮನೆಗೆ ಬಂದ.

ಅವನ ನಿಸ್ತೇಜ ಮುಖ ಕಂಡೊಡನೆಯೇ ಕಮಲಾಕ್ಷಮ್ಮನವರ ಎದೆ ದಸಕ್ಕೆಂದಿತು.

ರಾಮಸ್ವಾಮಿ ಅಣ್ಣನ ಬಳಿ ಬಂದು,

“ ಏನಾಯಿತು ಸುಬ್ಬೂ ” ಎಂದ.

“ ಸರ್ಕಾರಕ್ಕೆ ಜಯ ಲಭಿಸಿತು ರಾಮು—ನನಗೆ ಕಂಪಲ್ಸರಿ ರಿಟೈರ್‌ಮೆಂಟಾಯಿತು ”

ಎಂದು ಗೋಳಾಡಲಾರಂಭಿಸಿದ.

ಕಮಲಾಕ್ಷಮ್ಮ ಮಗನ ಬಳಿ ಸಾರಿ, ಅವನನ್ನಪ್ಪಿಕೊಂಡು,

" ಅಳಬೇಡಪ್ಪ—ನೀನೇನೂ ಕೈಲಾಗದವನಲ್ಲ. ನಿನ್ನ ಅನ್ನ ಸಂಪಾದಿಸಿ ಕೊಳ್ಳುವ ಶಕ್ತಿ ನಿನಗಿಲ್ಲವೇ ? "

" ಈ ಅಪಮಾನ ಹೇಗೆ ಸಹಿಸಲಮ್ಮ "

" ದೇವರನ್ನು ನಂಬು ಸುಬ್ಬೂ."

" ದೇವರು—ದೇವರು ಎಲ್ಲಿದ್ದಾನಮ್ಮ ? "

ಎಂದವನು ಉದ್ಗಾರವೆಳೆಯಲು ಕಮಲಾಕ್ಷಮ್ಮನವರು ಶಾಮಲೆಯ ನ್ನೆತ್ತಿಕೊಂಡು ಬಂದು, ಅವನ ಕೈಗೆ ಕೊಟ್ಟು,

" ನೋಡು—ಇಲ್ಲಿದ್ದಾನೆ " ಎಂದರು.

ಮಗುವನ್ನಪ್ಪಿ ಮುದ್ದಾಡುತ್ತ ಸುಬ್ಬುಕೃಷ್ಣ ಕಂಬನಿಯ ಧಾರೆಯ ಮಧ್ಯೆ,

" ಶಾಮಲಾ—ನನ್ನ ಅರಗಿಣಿ " ಎಂದ.

ಹೈಕೋರ್ಟಿನ ತೀರ್ಪು ಸುಬ್ಬುಕೃಷ್ಣನ ಹೃದಯದ ಮೇಲೆ ಬರೆ ಯೆಳೆದಿತ್ತು.

ಮೊದಲಿನ ಮಂಕು ಅವನನ್ನು ಮತ್ತೆ ಆವರಿಸಿತು.

ಒಂದೇ ಸ್ಥಳದಲ್ಲಿ ಗಂಟೆಗಟ್ಟಳೆ ಕೂಡುವನು. ಬೇಸರವಾದರೆ ಹೋಗಿ ಮಲಗುತ್ತಿದ್ದ. ' ಹೂ — ಉಹೂ ' ಬಿಟ್ಟು ಹೆಚ್ಚು ಮಾತನಾಡುವುದೂ ಅವನಿಗೆ ಬೇಕಿರಲಿಲ್ಲ.

ಸುಬ್ಬುಕೃಷ್ಣನ ಸ್ಥಿತಿ ಎಲ್ಲರಿಗೂ ಕಳವಳವನ್ನುಂಟುಮಾಡಿತು.

ಈ ನೋವು ಕಮಲಾಕ್ಷಮ್ಮನವರ ಹೃದಯುವನ್ನು ಕೀಟದಂತೆ ಕೊರೆಯ ಲಾರಂಭಿಸಿತು.

ರತ್ನಾ ಶಕ್ತಿಮೀರಿ ಅತ್ತೆಯ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದಳು.

" ಬೆಳಿಗ್ಗೆಯ ಅಡಿಗೆಯನ್ನೂ ನಾನು ಮಾಡುತ್ತೇನತ್ತೆ. ನೀವು ಆಯಾಸ ಪಟ್ಟುಕೊಳ್ಳಬೇಡಿ."

" ಚೆನ್ನಾಗಿದೆ ಕಣೇ ರತ್ನಾ. ಧಾಣಾಧಡಿ ನಾನು ಕುಳಿತುಕೊಂಡು ಎಳೆಯುಮಗುವಿನ ತಾಯಿ ನಿನ್ನ ಕೈಯಲ್ಲಿ ದುಡಿಸಲೇ ? "

ಎಂದು ಅವಳ ಸಲಹೆಯನ್ನು ತಳ್ಳಿಹಾಕುತ್ತಿದ್ದರು.

ಒಂದು ದಿನ ನಾಗೂಬಾಯಿ ಜತೆ ಮಾತನಾಡುತ್ತ ಕುಳಿತ ಕಮಲಾ ಕ್ಷಮ್ಮನವರು,

"ನಾಗೂಬಾಯಿ, ನನ್ನ ಕಾಲ ಮುಗಿಯಿತೆಂದು ಕಾಣತ್ರೀ" ಎಂದರು.

ನಾಗೂಬಾಯಿ ಗಾಬರಿಗೊಂಡು,

"ಏಕೆ ಕಮಲಾಕ್ಷಮ್ಮ?"

"ದಿನದಿನಕ್ಕೆ ಶಕ್ತಿ ಉಡುಗಿಹೋಗುತ್ತಿದೆ. ಚೆನ್ನಾಗಿ ಬಾಳುತ್ತಿದ್ದ ಮಗ ಹೀಗಾಗಿಬಿಟ್ಟ. ಇದನ್ನು ನೋಡುವುದು ನನ್ನ ಹಣೆಯಲ್ಲಿ ಬರೆದಿತ್ತು."

"ನೀವೇ ಧೈರ್ಯಗೆಟ್ಟರೆ ಮಕ್ಕಳ ಗತಿಯೇನು ಕಮಲಾಕ್ಷಮ್ಮ?"

"ಮಹಾರಾಯರ ಎದುರಿಗೆ ನಾನು ಕಣ್ಣುಮುಚ್ಚಿಕೊಂಡರೆ ಸಾಕು."

"ಈ ಮಾತು ಆಡಬೇಡಿ. ನೀವಿನ್ನೂ ಸುಬ್ಬೂ ಮಗು ಎತ್ತಿಕೊಳ್ಳಬೇಕಾಗಿದೆ."

"ಸುಬ್ಬೂ ಸಂಸಾರ............................"

"ಸುಮ್ಮನೆ ದುಃಖಿಸಬೇಡ್ರೀ. ಸುಬ್ಬೂ ಸಂಸಾರ ನೇರವಾಗುತ್ತದೆ. ಅವನು ಮೊದಲಿಗಿಂತಲೂ ಚೆನ್ನಾಗಿರುತ್ತಾನೆ. ಇದನ್ನು ನೀವೇ ಕಣ್ತುಂಬ ನೋಡುವಿರಿ"

ಎಂದು ಸಂತೈಸಿದರು.

ಅತ್ತೆ ದಿನದಿನಕ್ಕೆ ಸೊರಗಿ ಕಡ್ಡಿಯಂತಾಗುತ್ತಿದ್ದುದನ್ನು ಗಮನಿಸಿದ ರತ್ನಾ, ಒಂದು ದಿನ ಗಂಡನಿಗೆ,

"ಅತ್ತೆಮ್ಮನವರ ಆರೋಗ್ಯ ಏನೂ ಚೆನ್ನಾಗಿಲ್ಲ."

"ಹೌದು ರತ್ನಾ–ದೇಹದ ಕಾಯಿಲೆಗೆ ಔಷಧಿ ಇದೆ–ಮನೋರೋಗಕ್ಕೆ ಔಷಧಿಯನ್ನು ಎಲ್ಲಿಂದ ತರುವುದು."

"ಭಾವನವರಿಗೆ ಒಂದು ದಾರಿಯಾದರೆ ಅತ್ತೆಮ್ಮನವರು ಚೇತರಿಸಿಕೊಳ್ಳುತ್ತಾರೆ."

"ನಾನು ಏನು ಮಾಡಲು ಸಾಧ್ಯ?"

"ನಿಮ್ಮ ಕಂಪೆನಿಯಲ್ಲಿ ಅವರಿಗೆ ಕೆಲಸ ಕೊಡಿಸಲು ಸಾಧ್ಯವಿಲ್ಲವೇ?"

"ಸುಬ್ಬೂ ಒಪ್ಪಬೇಕಲ್ಲ—"

"ಅವರನ್ನು ನೀವೇ ಒಪ್ಪಿಸಬೇಕು."

"ಪ್ರಯತ್ನಮಾಡಿ ನೋಡುತ್ತೇನೆ ರತ್ನಾ"

ಎಂದು ಆಶ್ವಾಸನವಿತ್ತ.

೪೫

ಶಾಮಸುಂದರ್ ಅವರಿಂದ ಯಾವ ಕೆಲಸವಾಗಬೇಕಾದರೂ ರಾಮಸ್ವಾಮಿಯನ್ನು ಆಶ್ರಯಿಸಿದರೆ ಸಾಧ್ಯವಾಗುತ್ತದೆ ಎಂದು ಕಂಪೆನಿಯಲ್ಲಿ ಎಲ್ಲರಿಗೂ ಗೊತ್ತಿತ್ತು. ರಾಮಸ್ವಾಮಿ ನೌಕರರ ಯಾವ ಪ್ರಾರ್ಥನೆಯನ್ನೂ ನಿರಾಕರಿಸುತ್ತಿರಲಿಲ್ಲ. ಹಲವು ಹನ್ನೊಂದು ಬಗೆಯಲ್ಲಿ ನೌಕರರಿಗೆ ಸಹಾಯ ಮಾಡುತ್ತಿದ್ದ ರಾಮಸ್ವಾಮಿಯ ಉದಾರ ಮನಃಪ್ರವೃತ್ತಿಯನ್ನು ಶಾಮಸುಂದರ್ ಅವರು ಮೆಚ್ಚಿಕೊಂಡಿದ್ದರು.

ಒಂದು ದಿನ ರಾಮಸ್ವಾಮಿ ಆಫೀಸಿಗೆ ಬಂದು, ಶಾಮಸುಂದರ್ ಅವರ ಮುಂದೆ ಕೂಡಲು, ಅವರು ನಗುತ್ತಾ,

" ಯಾರಿಗಾದರೂ ಅಡ್ವಾನ್ಸ್ ಬೇಕೆ ಮಿ|| ರಾಮಸ್ವಾಮಿ " ಎಂದರು.

" ಇಲ್ಲ ಸರ್. ನಿಮ್ಮಿಂದ ನನಗೇ ಒಂದು ಸಹಾಯವಾಗಬೇಕಾಗಿದೆ."

" ಹೇಳಿ."

ಸ್ವಲ್ಪವೂ ಮರೆಮಾಜದೆ, ಇದ್ದದ್ದು ಇದ್ದಂತೆ ಸುಬ್ಬುಕೃಷ್ಣನ ವಿಷಯ ನಿರೂಪಿಸಿ,

" ನಮ್ಮಣ್ಣನವರಿಗೆ ಒಂದು ನೆಲೆಯಾದರೆ, ನಮ್ಮ ತಾಯಿ ಬದುಕಿಕೊಳ್ಳುತ್ತಾರೆ."

" ನಿಮ್ಮ ಅಣ್ಣನವರ ಚರಿತ್ರೆ ಅಷ್ಟೇನೂ................"

" ಅದು ನಿಜ ಸರ್. ಆದರೆ ಅವನು ದಕ್ಷ— ಹಿಡಿದ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸುವ ಸಾಮರ್ಥ್ಯವಿದೆ."

" ನಾನು ಏನು ಮಾಡಲು ಸಾಧ್ಯ ? "

" ಆಫೀಸಿನಲ್ಲಿ ಒಂದು ಕೆಲಸ ಕೊಡಲು ಸಾಧ್ಯವಿಲ್ಲವೇ ? "

" ಏನಾಗಿ ? "

" ಜನರಲ್ ಸೂಪರ್‌ವಿಷನ್ನಿಗೆ ನಮಗೆ ಒಬ್ಬರು ಬೇಕು."

" ನಿಮ್ಮಣ್ಣ ಆ ಕೆಲಸ ನಿರ್ವಹಿಸಬಲ್ಲರೇ ? "

" ನಿರ್ವಹಿಸಬಲ್ಲರು."

" ಹಣಕಾಸಿನ ವ್ಯವಾಟವಿರುತ್ತದಲ್ಲ ಮಿ|| ರಾಮಸ್ವಾಮಿ."

" ಹಣಕಾಸಿಗೆ ನಾನು ಜವಾಬ್ದಾರ."

" ಸಂಬಳ ಎಷ್ಟು ಕೊಡಬೇಕು."

" ನಿಮ್ಮ ಚಿತ್ತ."

" ಮೊದಲನೆಯ ತಾರೀಖಿನಿಂದ ಬರಲಿ. ಒಂದು ವಾರ ಅವರ ಕೆಲಸ ನೋಡಿ ಸಂಬಳ ನಿಷ್ಕರ್ಷಿಸುತ್ತೇನೆ."

" ಹಾಗೇ ಮಾಡಿ ಸರ್ "

ಎಂದು ಹೃತ್ಪೂರ್ವಕವಾಗಿ ಅವರನ್ನು ಅಭಿವಂದಿಸಿ ಹೊರಬಂದ.

' ಕೆಲಸವನ್ನಂತೂ ಹೊಂದಿಸಿಯಾಯಿತು !

ಸುಬ್ಬೂನ ಒಪ್ಪಿಸುವುದು ಹೇಗೆ ? '

ಎಂಬ ಸಮಸ್ಯೆ ರಾಮಸ್ವಾಮಿ ಎದುರು ನಿಂತಿತು.

ಮನೆಗೆ ಬಂದ ರಾಮಸ್ವಾಮಿ, ತಾಯಿಗೆ ಎಲ್ಲವನ್ನೂ ನಿವೇದಿಸಿ,

" ಸುಬ್ಬೂನ ನೀನು ಒಪ್ಪಿಸಬೇಕಮ್ಮ " ಎಂದ.

" ಅವನನ್ನು ಇಲ್ಲಿ ಕರಿ ರಾಮು."

ರಾಮಸ್ವಾಮಿ ಹೊರಗೆ ಹೋಗಿ,

" ಅಮ್ಮ ನಿನ್ನ ನೋಡಬೇಕಂತೆ ಸುಬ್ಬೂ " ಎಂದ.

ಸುಬ್ಬುಕೃಷ್ಣ ಒಳಗೆ ಬಂದು,

" ಏನಮ್ಮ—ಕರೆದೆಯಂತೆ ! " ಎಂದು ಕೇಳಿದ.

" ಕುಳಿತುಕೊಳ್ಳಪ್ಪ."

ಅವನು ಕುಳಿತುಕೊಳ್ಳಲು,

" ನೀನು ಹೀಗೆ ಕೊರಗುವುದನ್ನು ನಾನು ನೋಡಲಾರೆ ಸುಬ್ಬು."

" ಅದೇ ನನ್ನ ಪಾಲಿಗೆ ಬಂದಿರುವ ಪಂಚಾಮೃತ."

" ಆದದ್ದಾಯಿತು—ಮರೆತುಬಿಡು."

"ರಾಮೂನ ಆಶ್ರಯಿಸಿ ಬಾಳುವಂತಾಯಿತಲ್ಲಮ್ಮಾ—ನನ್ನ ಪಾಡು."

"ರಾಮು ಬೇರೆ—ನೀನು ಬೇರೆಯೇ?"

"ನಿಜ. ಆದರೆ ನನ್ನ ಕೈ ನಡೆಯುತ್ತಿದ್ದಾಗ ನಾನು ಅವನಿಗೆ ಏನೂ ಮಾಡಲಿಲ್ಲ. ಒಮ್ಮೆ ಅವನು ಬಂದು ಜೋಗಿನಿಂದ ವರ್ಗಮಾಡಿಸು ಎಂದು ಕೇಳಿದ—ಅದನ್ನೂ ನಾನು ನಿರಾಕರಿಸಿದೆ."

"ರಾಮು ಅದನ್ನು ಮನಸ್ಸಿನಲ್ಲಿಟ್ಟುಕೊಂಡಿಲ್ಲ."

"ಅದು ಅವನ ದೊಡ್ಡ ಗುಣ."

"ನಿನ್ನ ಯೋಗ್ಯತೆ—ಶಕ್ತಿಗೆ ನಿನಗೆ ಕೆಲಸ ಸಿಕ್ಕುವುದಿಲ್ಲವೇ?"

"ಯಾರು ನನಗೆ ಕೆಲಸ ಕೊಡುತ್ತಾರೆ. ಈ ಮುಖವೆತ್ತಿಕೊಂಡು ಹೋಗಿ ನಾನು ಯಾರನ್ನು ಕೇಳಲಿ?"

"ಕೆಲಸ ಸಿಕ್ಕುವುದಾದರೆ ನೀನು ಕೆಲಸಕ್ಕೆ ಹೋಗುವೆಯಾ?"

"ಧಾರಾಳವಾಗಿ."

"ರಾಮು ಧಣಿಗಳು ನಿನಗೆ ಕೆಲಸಕೊಡಲೊಪ್ಪಿದ್ದಾರೆ."

ವಿಕಟನಗೆ ನಕ್ಕ ಸುಬ್ಬುಕೃಷ್ಣ,

"ಇದು ದೈವದ ಎದಿರೇಟು?"

"ಹಾಗಂದರೇನೋ?"

"ರಾಮೂಗೆ ನಾನು ಟ್ರಾನ್ಸ್‌ಫರ್ ಕೊಡಿಸಲಿಲ್ಲ—ಅವನು ನನಗೆ ಕೆಲಸ ಕೊಡಿಸುತ್ತಿದ್ದಾನೆ."

"................................................"

"ಅಮ್ಮ, ರಾಮು ಹಂಗಿನಲ್ಲಿ ನಾನು ಬಾಳಲಾರೆ. ಈ ಕೆಲಸ ನನಗೆ ಬೇಕಿಲ್ಲ."

ಕೋಪವನ್ನೇ ಕಾಣದ ಕಮಲಾಕ್ಷಮ್ಮನವರಿಗೆ ತಡೆಯಲಾಗದಷ್ಟು ಕೋಪ ಬಂದಿತು.

"ಅವರೂ, ನಾನೂ ಬದುಕಿರುವವರೆಗೆ ಯಾರ ಹಂಗೂ ಇಲ್ಲ—ನಮ್ಮ ಹಂಗು. ನೀನು ಒಂದು ನೆಲೆ ಕಾಣದಿದ್ದರೆ ನಾನು ಬದುಕುವುದಿಲ್ಲ. ನಾನು ಹೆಚ್ಚೋ—ನಿನ್ನ ಪ್ರತಿಷ್ಠೆ ಹೆಚ್ಚೋ?"

"ನೀನು ಕೋಪದಿಂದ ಮಾತನಾಡುತ್ತಿರುವುದು ಇದೇ ಮೊದಲು."

" ಇದೇ ಮೊದಲು. ಇದೇ ಕೊನೆ — ಇದೇ ನನ್ನ ಕೊನೆಯೂ ಆಗಬಹುದು."

" ಅಮ್ಮ, ಹಾಗನ್ನಬೇಡ— ನೀನು ಏನು ಹೇಳಿದರೂ ಮಾಡಲು ನಾನು ಸಿದ್ಧನಾಗಿದ್ದೇನೆ. ನಿನಗೂ ಅಣ್ಣನಿಗೂ ನಾನು ಮಾಡಿದ ಅನ್ಯಾಯದ ಫಲ ಈಗ ಅನುಭವಿಸುತ್ತಿದ್ದೇನೆ. ಮುಂದಿನ ಜನ್ಮಕ್ಕೂ ಬುತ್ತಿ ಕಟ್ಟಲಾರೆ— ಈ ಮೂರ್ಖ ಮಗನನ್ನು ಕ್ಷಮಿಸು "

ಎಂದು ತಾಯಿಯ ಪಾದಗಳ ಮೇಲೆಬಿದ್ದ.

## ೪೬

ಸುಬ್ಬುಕೃಷ್ಣ ಒಂದು ನೆಲೆಕಂಡರೂ, ಕಮಲಾಕ್ಷಮ್ಮನವರ ಮನಸ್ಸಿನ ಮನಸ್ಸಿನ ಗಾಯ ವಾಗಲಿಲ್ಲ. ಅವರ ಆರೋಗ್ಯ ದಿನೇದಿನೇ ಇಳಿಮುಖ ವಾಗುತ್ತ ಬಂದಿತು. ಕೆಲಸಕಾರ್ಯಗಳ ಜವಾಬ್ದಾರಿಯೆಲ್ಲಾ ರತ್ನನ ಮೇಲೆ ಬಿದ್ದಿತು.

ಡಾಕ್ಟರ ಇಂಜಕ್ಷನ್ನುಗಳು ಕಮಲಾಕ್ಷಮ್ಮನವರನ್ನು ಮತ್ತಷ್ಟು ದುರ್ಬಲ ಗೊಳಿಸಿದವು.

ಸಣ್ಣಮಗುವಿನ ಯೋಗಕ್ಷೇಮವನ್ನೂ ನೋಡಿಕೊಂಡು, 'ಮೂಗಿಗೆ ಕವಡೆ ಕಟ್ಟಿಕೊಂಡು' ದುಡಿಯುತ್ತಿದ್ದ ರತ್ನನನ್ನು ನೋಡಿದರೆ ಕಮಲಾ ಕ್ಷಮ್ಮನವರ ಕರುಳು ಮಿಡಿಯುತ್ತಿತ್ತು.

"ಗಾಣದೆತ್ತಿನಂತೆ ನಿನ್ನನ್ನು ದುಡಿಸುತ್ತಿದ್ದೇನಲ್ಲ ರತ್ನಾ !"

"ಈ ಯೋಚನೆಗಳನ್ನು ಬಿಟ್ಟು ನೀವು ನಿರಾತಂಕವಾಗಿರುತ್ತೀರೋ ಇಲ್ಲವೋ ಅತ್ತೆ. ನನ್ನ ಮನೆ ನನಗೆ ಗಾಣವೇ ?"

"ನಾನು ಎದ್ದು ಓಡಿಯಾಡುವ ಹಾಗಾದರೆ ಸಾಕು ಕಣೇ. ಮಲಗಿ ಮಲಗಿ ಮೈಯಲ್ಲಾ ನೋವು ಬಂದಿದೆ—"

"ಯಾರು ಹೇಳಿದರೂ ನೀವು ವಿಶ್ರಾಂತಿ ತೆಗೆದುಕೊಳ್ಳುತ್ತಿರಲಿಲ್ಲ. ಈಗ ಬೇಡವಾದರೂ ವಿಶ್ರಾಂತಿ ಅನುಭವಿಸಬೇಕಾಗಿದೆ."

"ಶಾರದಾ ಇದ್ದಿದ್ದರೆ ನಿನಗೆ ಸ್ವಲ್ಪ ಬಿಡುವಾದರೂ ದೊರೆಯುತ್ತಿತ್ತು."

"..........................................................."

"ಅವಳೂ ಜಾಣೆ ಕಣೇ. ಎಲ್ಲಾ ಕೆಲಸವೂ ಬರುತ್ತದೆ."

ರತ್ನಾ ನಗುತ್ತಾ,

" ಇಲ್ಲ ಎಂದು ನಾನು ಹೇಳಿಡೆನೇ ಅತ್ತೆ."

" ನಿನ್ನ ಬಾಯಲ್ಲಿ ಅಂಥ ಮಾತು ಎಂದಿಗೂ ಬರಲ್ಲಪ್ಪ—ಸುಬ್ಬೂ ನನ್ನ ಮಾತು ಕೇಳಲ್ಲ. ರಾಮೂನೇ ಅವನನ್ನು ದಾರಿಗೆ ತರಬೇಕು."

" ಅವರು ಶಕ್ತಿಮೀರಿ ಪ್ರಯತ್ನಿಸುತ್ತಿದ್ದಾರೆ. ಆದರೆ ಭಾವನವರು ಇನ್ನು ಹಟಮಾಡುತ್ತಿದ್ದಾರೆ."

" ದೇವರು ಕಣ್ಣುಬಿಟ್ಟು ನೋಡಿದ ರತ್ನಾ–ನನ್ನ ಮನೆ ಸ್ವರ್ಗವಾಯಿತು. ಆದರೆ ಈ ನೋವು ನನ್ನ ಮನಸ್ಸನ್ನು ಹಿಂಡುತ್ತಿದೆ."

ಅಸಹಾಯಕಳಾಗಿದ್ದ ರತ್ನಾ ಅತ್ತೆಗಾಗಿ ಮರುಗಿದಳು.

ತಿಂಗಳು ಕಳೆದಿತ್ತು.

ಮೊದಲನೆಯ ತಿಂಗಳು ಸಂಬಳ ತೆಗೆದುಕೊಂಡು ಸುಬ್ಬುಕೃಷ್ಣ, ತಾಯಿಯ ಬಳಿಗೆ ಬಂದು ಹಣವನ್ನು ಅವಳ ಮುಂದಿಟ್ಟು,

" ನನ್ನ ಮೊದಲನೆಯ ತಿಂಗಳ ಸಂಬಳ—ಮುನ್ನೂರು ರುಪಾಯಿ...." ಎಂದ.

" ಇದನ್ನು ತೆಗೆದುಕೊಂಡು ನಾನೇನು ಮಾಡಲಿ ಸುಬ್ಬೂ."

" ಹಾಗಂದರೆ............... !"

" ಇದರ ವಾರಸುದಾರಳು ನಾನಲ್ಲ. ಶಾರದಾ ! "

" ಆ ಪ್ರಕರಣ ಮುಗಿದು ಎಷ್ಟೋ ದಿನಗಳಾದವು."

" ಒಂದು ಸಣ್ಣ ಮಾತು ಬಂದಾಕ್ಷಣ ಗಂಡ, ಹೆಂಡತಿಯ ಸಂಬಂಧ ಮುರಿದು ಬೀಳುವುದೇ ? "

" ಈ ವಿಷಯ ನಾವು ಈಗಾಗಲೇ ಬಹಳ ಚರ್ಚೆ ಮಾಡಿದ್ದೇವೆ. ಪುನಃ ಪುನಃ ಅದನ್ನೇ ಏಕೆ ಮಾತನಾಡಬೇಕು."

" ಈ ಮನೆಯ ಯಜಮಾನಿಕೆ ಇನ್ನೂ ನನ್ನ ಕೈಯಲ್ಲಿದೆ ಸುಬ್ಬೂ."

" ಯಾರು ಇಲ್ಲ ಎಂದರಮ್ಮ."

" ನೀನು ಹಟ ಹಿಡಿಯುವುದು ನ್ಯಾಯವಲ್ಲ."

" ..................................................."

" ಒಂದು ವೇಳೆ ಶಾರದಾ ತಪ್ಪಿತಸ್ಥಳಾಗಿದ್ದರೆ, ಅವಳಿಗೆ ಈಗಾಗಿರುವ ಶಿಕ್ಷೆ ಸಾಲದೇ ? "

" ನನ್ನ ಪತನಕ್ಕೆ ಅವಳೇ ಮೂಲ."

" ಹುಚ್ಚ. ಯಾರ ಪತನಕ್ಕೆ ಯಾರು ಕಾರಣ?—ನಿನ್ನ ಪತನಕ್ಕೆ ನೀನೆ ಕಾರಣ. ಅವಳಿಗೆ ನೀನು ಮಿತಿಮೀರಿದ ಸ್ವಾತಂತ್ರ್ಯ ಕೊಡದಿದ್ದರೆ ಹೀಗಾಗುತ್ತಿತ್ತೇ ? "

" ಹೋಗಲಿ ಬಿಡಮ್ಮ. ಈ ವಿಷಯ ಮಾತನಾಡುವುದು ಬೇಡ."

" ಸುಬ್ಬೂ, ಕೆಲವು ದಿನಗಳ ಹಿಂದೆ, ನೀನು ಪಶ್ಚಾತ್ತಾಪ ವ್ಯಕ್ತಗೊಳಿಸಿ, ನನ್ನ ಕ್ಷಮೆ ಬೇಡಿದೆ........"

" ಹೌದು."

" ಅದು ಋಜುವಾಗಿದ್ದರೆ ನೀನು ನನ್ನ ಮಾತು ಕೇಳಬೇಕು."

" ಶಾರದೆಯನ್ನು ಇಲ್ಲಿಗೆ ಬರಮಾಡಬೇಕು."

" ಹೌದು. ಅವಳೂ ನೀನೂ ಒಮ್ಮತಿ ಸಮ್ಮತಿಯಿಂದ ಬಾಳ್ವೆ ಮಾಡು ವುದನ್ನು ನೋಡಿದಲ್ಲದೆ ನನ್ನ ಮನಸ್ಸಿಗೆ ನೆಮ್ಮದಿಯಾಗದು."

ಒಂದೇ ಸಮನೆ ಹಟ ಹಿಡಿದಿದ್ದ ತಾಯಿಯನ್ನು ಹೇಗೆ ಸಮಾಧಾನ ಗೊಳಿಸುವುದೆಂಬುದೇ ಸುಬ್ಬುಕೃಷ್ಣನಿಗೆ ಸಮಸ್ಯೆಯಾಯಿತು.

ಅವನು ಯೋಚಿಸುತ್ತಾ,

" ಶಾರದಾ ಇಲ್ಲಿಗೆ ಬರಲು ನಾನು ಒಪ್ಪುತ್ತೇನೆ — ಒಂದು ಕರಾರಿನ ಮೇಲೆ......................."

" ಏನು ನಿನ್ನ ಕರಾರು ? "

" ಅವಳು ನಿನ್ನ ಸೇವೆ ಮಾಡಿಕೊಂಡಿರಲಿ—ನಾನು ಅವಳನ್ನು ಅಪರಿಚಿತ ಳಂತೆಯೇ ಕಾಣುವುದು."

ಇದು ತಮ್ಮ ಜಯವೆಂಬುದು ಕಮಲಾಕ್ಷಮ್ಮನವರಿಗೆ ಸುಸ್ಪಷ್ಟವಾಯಿತು. ಅವರು ಅದನ್ನು ತೋರಗೊಡದೆ,

" ಕೊನೆಗೂ ನಿನ್ನ ಹಟವೇ ಹಟ " ಎಂದರು.

ಸಂಜೆಗೆ ರಾಮು ಮನೆಗೆ ಬರಲು, ಅವನನ್ನು ಹತ್ತಿರ ಕರೆದು,

" ಸುಬ್ಬೂ ಒಪ್ಪಿದ್ದಾನಪ್ಪಾ " ಎಂದರು..

" ಯಾವದಕ್ಕಮ್ಮ."

" ಶಾರದೆಯನ್ನು ಇಲ್ಲಿಗೆ ಕರೆಸಿಕೊಳ್ಳುವುದಕ್ಕೆ."

" ಅವನೇ ಹೋಗಿ ಕರೆದುಕೊಂಡು ಬರುವುದು ಒಳ್ಳೆಯದು."

" ಅದು ಈಗಲೇ ಸಾಧ್ಯವಿಲ್ಲ ರಾಮು. ಕೆಲವು ದಿನ ಅವಳು ಅಪರಿಚಿತಳಂತೆ ಇರಬೇಕಾಗುತ್ತದೆ."

" ಅಣ್ಣನಷ್ಟೇ ಅತ್ತಿಗೆಯೂ ಹಟವಾರಿ. ಅವಳು ಒಪ್ಪದಿದ್ದರೆ...."

" ಅವಳು ಇಲ್ಲಿಗೆ ಬರಲಿ—ಮಿಕ್ಕ ವಿಷಯ ನಾನು ನೋಡಿಕೊಳ್ಳುತ್ತೇನೆ. ನೀನೇ ಹೋಗಿ ಅವಳನ್ನು ಕರೆದುಕೊಂಡು ಬಾ."

" ನನ್ನ ಜತೆ ಒಬ್ಬರು ಹೆಂಗಸರು ಬಂದಿದ್ದರೆ ಚೆನ್ನಾಗಿತ್ತು."

" ನಾನೇ ಬರುತ್ತಿದ್ದೆ........"

" ನೀನು ಹಾಸಿಗೆ ಬಿಟ್ಟು ಏಳಕೂಡದೆಂದು ಡಾಕ್ಟರು ಹೇಳಿದ್ದಾರೆ."

" ನಾಗೂಬಾಯಿಯವರನ್ನು ಕರೆದುಕೊಂಡು ಹೋಗು."

" ಭಾನುವಾರವೇ ನನಗೆ ಪುರಸತ್ತು."

" ಅವತ್ತೇ ಹೋಗು " ಎಂದರು.

# ೪೭

ಮನೆಯ ಮುಂದೆ ನಿಂತ ಕಾರನ್ನು ನೋಡಿ, 'ಯಾರಿರಬಹುದು' ಎಂದು ಶಂಕರನಾರಾಯಣರಾಯರು ಯೋಚಿಸಿದರು.

ರಾಮಸ್ವಾಮಿ, ನಾಗೂಬಾಯಿಯವರು ಕಾರಿನಿಂದಿಳಿಯಲು, ರಾಯರು ಒಳಗೆ ಹೋಗಿ ಹೆಂಡತಿಗೆ ತಿಳಿಸಿದರು.

ಪದ್ಮಾವತಮ್ಮನವರೇ ನಾಗೂಬಾಯಿಯವರನ್ನು ಸ್ವಾಗತಿಸಿ ಒಳಗೆ ಕರೆದೊಯ್ದರು.

ಶಂಕರನಾರಾಯಣರಾಯರು ಸೌಜನ್ಯದಿಂದ,

"ಬಾಪ್ಪ—ರಾಮಸ್ವಾಮಿ" ಎಂದರು.

"ಇಬ್ಬರೂ ಹಜಾರದಲ್ಲಿ ಕೂಡಲು, ವೆಂಕಟೇಶ ಕಾಫಿ ತಂದಿತ್ತ.

ರಾಮಸ್ವಾಮಿ ಕಾಫಿ ಸೇವಿಸುತ್ತಾ,

"ಅತ್ತಿಗೆಮ್ಮ ಹೇಗಿದ್ದಾರೆ ಸ್ವಾಮಿ" ಎಂದು ಕೇಳಿದ.

"ಇದ್ದಾಳೆ..........."

"ಅವರನ್ನು ಕರೆಸಿ—ನಾನು ಮಾತನಾಡಬೇಕು."

ಕಾಫಿ ಲೋಟಗಳನ್ನು ತೆಗೆದುಕೊಂಡು ಹೋಗಲು ಬಂದ ವೆಂಕಟೇಶನಿಗೆ ರಾಯರು,

"ಶಾರದನ್ನ ಕರೆ ವೆಂಕಟೇಶ" ಎಂದರು.

ಶಾರದಾ ಬಂದು ಬಾಗಿಲು ಬಳಿ ನಿಂತರು.

ಅತ್ತಿಗೆಯನ್ನು ಕಂಡಕೂಡಲೆ ರಾಮಸ್ವಾಮಿಯ ಕಣ್ಣುಗಳಲ್ಲಿ ನೀರು ತುಂಬಿತು.

ಸೆರಗಿನ ಕೊನೆಯಿಂದ ಶಾರದೆಯೂ ಕಣ್ಣುಗಳನ್ನೊರಸಿಕೊಂಡಳು.

"ನಿಮ್ಮ ಗುರುತೇ ಸಿಕ್ಕದ ಹಾಗಾಗಿದೆ ಅತ್ತಿಗೆ."

"ಈ ಭೂಮಿಗೆ ನಾನು ಭಾರ....ಮನೆಯಲ್ಲಿ..............."

" ಎಲ್ಲರೂ ಚೆನ್ನಾಗಿದ್ದೇವೆ.   ಅಮ್ಮ..............."

" ಅತ್ತೆಮ್ಮನವರು ಹೇಗಿದ್ದಾರೆ ? "

" ಹಾಸಿಗೆ ಹಿಡಿದು ಮಲಗಿದ್ದಾಳೆ."

" ಏನು ಕಾಹಿಲೆ."

" ಮನೋರೋಗ ! "

" ಅವರು......................."

" ಚೆನ್ನಾಗಿದ್ದಾನೆ.   ಸುಬ್ಬೂಗೆ ಕೆಲಸವಾಗಿದೆ."

" ಎಲ್ಲಿ ? "

" ನಮ್ಮ ಕಂಪೆನಿಯಲ್ಲಿ."

" ಅತ್ತೆಮ್ಮನವರನ್ನು ಯಾರು ನೋಡಿಕೊಳ್ಳುತ್ತಿದ್ದಾರೆ ? "

" ರತ್ನಾ............"

" ನನಗೆ ಆ ಭಾಗ್ಯವಿಲ್ಲ."

" ಏಕಿಲ್ಲ ಅತ್ತಿಗೆಮ್ಮ."

" ನಾನು ಯಾರಿಗೂ ಬೇಡದ ವಸ್ತುವಾದೆ."

" ಎಲ್ಲರಿಗೂ ನೀವು ಬೇಕಾಗಿರುವುದರಿಂದಲೇ ನಾನು ಬಂದಿರುವುದು—ನಿಮ್ಮನ್ನು ಕರೆದುಕೊಂಡು ಹೋಗುವುದಕ್ಕೆ ! "

" ಅವರೇಕೆ ಬರಲಿಲ್ಲ."

" ಸುಬ್ಬೂಗೆ ರಜಾ ಸಿಕ್ಕಲಿಲ್ಲ."

" ಅವರಿಗೆ ನಾನು ಬೇಡ—ನೂರಾರು ಕಾಗದ ಬರೆದೆ—ಒಂದಕ್ಕೂ ಜವಾಬು ಬರೆಯಲಿಲ್ಲ."

" ಕಳೆದುಹೋದುದನ್ನು ಮರೆತು ಬಿಡಿ ಅತ್ತಿಗೆ."

" ಹೇಗೆ ಮರೆಯಲಿ ರಾಮು—ಯಾವ ಅಪರಾಧ ಮಾಡಿದೆನೆಂದು ನನಗೆ ಈ ಶಿಕ್ಷೆ."

" ಎಲ್ಲವನ್ನೂ ಮರೆತು—ನನ್ನೊಂದಿಗೆ ಹೊರಡಿ."

" ಅವರು ಬಂದು ಕರೆದಲ್ಲದೆ ನಾನು ಬರುವುದಿಲ್ಲ."

" ಹಟವನ್ನು ಹಟದಿಂದ ಗೆಲ್ಲಲು ಸಾಧ್ಯವಿಲ್ಲ ಅತ್ತಿಗೆ.   ಯಾರಾದರೂ ಒಬ್ಬರು ಸೋಲಬೇಕು."

" ತಪ್ಪು ಮಾಡದಿರುವ ನಾನು ಸೋಲಬೇಕೇ? "

" ಸೋಲಬೇಕು—ಎಲ್ಲರ ಸಲುವಾಗಿ—ಅಮ್ಮನಿಗಾಗಿ! ನೀವು ಬಂದರೆ ಅಮ್ಮ ಬದುಕುವ ಸಂಭವವಿದೆ. ನಿಮಗಾಗಿ ಕಣ್ಣೀರು ಮಿಡಿದು ಮಿಡಿದು ಅವಳು ಹಾಸಿಗೆ ಹಿಡಿದು ಮಲಗಿದ್ದಾಳೆ."

ಶಂಕರನಾರಾಯಣರಾಯರು ಮಧ್ಯೆ ಬಾಯಿ ಹಾಕಿ,

" ಇನ್ನು ಹಟ ಮಾಡಬೇಡ ಶಾರದಾ—ರಾಮುಸ್ವಾಮಿ ಜತೆ ಹೋಗು. ನಿಮ್ಮತ್ತೆಮ್ಮನವರ ಪ್ರಾಣಕ್ಕಿಂತ ನಿನ್ನ ಹಟ ದೊಡ್ಡದಲ್ಲ."

" ಅವರು ನನ್ನನ್ನು ಕಣ್ಣೆತ್ತಿಯೂ ನೋಡದಿದ್ದರೆ.............."

" ಕಾಲಾನುಕ್ರಮದಲ್ಲಿ ಎಲ್ಲವೂ ಸರಿಹೋಗುತ್ತದೆ ಅತ್ತಿಗೆ. ನಾನು ಇಲ್ಲಿಗೆ ಈಗ ಬಂದಿರುವುದೇ ನಿದರ್ಶನ."

ಒಂದೆರಡು ನಿಮಿಷ ಯೋಚಿಸಿದ ಶಾರದಾ,

" ನಾನು ಯಾವಾಗ ಹೊರಡಬೇಕು ರಾಮು."

" ಸಾಧ್ಯವಾದರೆ ಈಗಲೇ! "

" ಊಟಮಾಡಿಕೊಂಡು ಹೊರಡಿ "

ಎಂದು ಶಂಕರನಾರಾಯಣರಾಯರು ಹೇಳಿದರು.

ಪದ್ಮಾವತಮ್ಮ ತೊವ್ವೆ, ಪಾಯಸದ ಅಡಿಗೆ ಮಾಡಿಸಿದರು.

ಎಲ್ಲರೂ ಊಟ ಮುಗಿಸಿದರು.

ನಾಲ್ಕು ಗಂಟೆಯವರೆಗೆ ರಾಮುಸ್ವಾಮಿ ವಿಶ್ರಾಂತಿ ಪಡೆದ.

ಅವನು ಎದ್ದ ಕೂಡಲೆ ವೆಂಕಟೇಶ ಕಾಫಿ ತಂದಿತ್ತ.

" ಚಿಕ್ಕ ಅಮ್ಮಾವರು ಹೊರಡಲು ಸಿದ್ಧವಾಗಿದ್ದಾರೇನು ನೋಡು ವೆಂಕಟೇಶ " ಎಂದ.

ಪದ್ಮಾವತಮ್ಮನವರು, ನಾಗೂಬಾಯಿಯವರಿಗೆ ನೆನಕೆ ಸಲ್ಲಿಸುತ್ತಾ,

" ಶಾರದೆ ಸಂಸಾರ ಅಚ್ಚುಕಟ್ಟಾಗುವಂತೆ ಮಾಡಿ ನಾಗೂಬಾಯಿ ಯವರೇ—"

" ಮಾಡುವುದನ್ನೆಲ್ಲಾ ಆ ಮಹಾತಾಯಿ—ನಿಮ್ಮ ಬೀಗಿತ್ತಿ ಮಾಡಿದ್ದಾರೆ ಪದ್ಮಾವತಮ್ಮನವರೇ. ಸುಬ್ಬೂ ಒಳ್ಳೆಯ ಹುಡುಗ — ಸ್ವಲ್ಪ ಹಟಮಾರಿ—ಶಾರದಾ ಸೋತು ಗೆಲ್ಲಬೇಕಮ್ಮ, ಅವನು ಹಟಮಾಡುತ್ತಾನೆಂದು ಇವಳೂ ಹಟಮಾಡಬಾರದು."

"ದೊಡ್ಡವರು. ನಿಮಗೇ ಎಲ್ಲಾ ಬಿಟ್ಟದ್ದೀನ್ರೀ" ಎಂದರು.

ಶಾರದಾ ಬಂದು ತಂದೆಗೂ, ತಾಯಿಗೂ ನಮಸ್ಕರಿಸಿದಳು.

ಪದ್ಮಾವತಮ್ಮ ಇತ್ತ ಫಲತಾಂಬೂಲ ತೆಗೆದುಕೊಂಡ ನಾಗೂಬಾಯಿಯವರು,

"ಶಾರದಾ ಇಲ್ಲಿಗೆ ಬೇಗ ಬರುತ್ತಾಳೆ—ಯೋಚಿಸಬೇಡಿ ಪದ್ಮಾವತಮ್ಮ—ರಾಜಕುಮಾರನನ್ನು ಎತ್ತಿಕೊಳ್ಳುವುದಕ್ಕೆ!"

"ಸದ್ಯ ನಿಮ್ಮ ಬಾಯಿಹರಕೆಯಿಂದ ಅಷ್ಟಾಗಲಮ್ಮ."

ರಾಮಸ್ವಾಮಿ, ಶಾರದಾ, ನಾಗೂಬಾಯಿ ಬೆಂಗಳೂರು ತಲಪುವ ವೇಳೆಗೆ ಒಂಭತ್ತಾಯಿತು.

ಅವರ ದಾರಿಯನ್ನೇ ಕಾಯುತ್ತಿದ್ದ ರತ್ನಾ ಧಾವಿಸಿ ಬಂದು ಅಕ್ಕನನ್ನಪ್ಪಿದಳು.

"ಅತ್ತೆಮ್ಮನವರೆಲ್ಲಿ ರತ್ನಾ?"

"ಒಳಗಿದ್ದಾರೆ ಬನ್ನಿ ಅಕ್ಕ."

ಶಾರದೆ ಒಳಗೆ ಬರಲು ಕಮಲಾಕ್ಷಮ್ಮ ಎರಡು ಕೈಗಳನ್ನು ಚಾಚಿದರು. ಶಾರದೆ ಅವರ ಬಳಿ ಹೋಗಿ ಕೂಡಲು, ಸೊಸೆಯನ್ನಪ್ಪಿ, ಅವಳ ಮುಂದಲೆ, ಕೆನ್ನೆ ನೇವರಿಸುತ್ತಾ,

"ನನ್ನ ಮಗು ಎಷ್ಟು ಬಳಲಿದೆಯಮ್ಮ—ನಿನ್ನ ನೋಡಿದರೆ ಕರುಳು ಕಿತ್ತುಬರುತ್ತದಲ್ಲೇ ಶಾರದಾ—ಗಜಗೌರಿ ಇದ್ದ ಹಾಗೆ ಇದ್ದವಳು ಹೇಗಾಗಿ ಹೋಗಿದ್ದೀಯಪ್ಪ!"

ಶಾರದಾ ಅವರ ಎದೆಯ ಮೇಲೆ ಮುಖವಿಟ್ಟು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

"ಅಳಬೇಡಪ್ಪ—ಗ್ರಹಚಾರ ಕಳೆಯಿತು—ಇನ್ನು ಎಲ್ಲಾ ಚೆನ್ನಾಗುತ್ತದೆ—ಶಾಮಲೀನ ನೋಡಿದೆಯಾ?"

ರತ್ನಾ ಮಗುವನ್ನು ತಂದು ಶಾರದೆಯ ಕೈಗಿತ್ತಳು.

"ನೋಡಿದೆಯಾ ಹೇಗಿದ್ದಾಳೆ ಈ ತಾಟಕಿ—ಈಗಲೇ ಒಂದೊಂದು ಮಾತಾಡ್ತಾಳೆ ಕಣೇ—ಶಾಮಲೂ—ನನ್ನ ಚಿನ್ನಾ—'ಅಜ್ಜಿ' ಎನ್ನಪ್ಪ."

ಮಗು ತೊದಲುನುಡಿಯಲ್ಲಿ 'ಅ ಜೀ' ಎಂದಿತು.

# ೪೮

ರತ್ನಾ, ಶಾರದಾ ಮನೆಗೆಲಸಗಳನ್ನು ಹಂಚಿಕೊಂಡರು.

ರತ್ನಾ ಅಡಿಗೆಗೆ ಹೋದರೆ ಶಾರದಾ ಅತ್ತೆಯನ್ನೂ ಶಾಮಲನನ್ನೂ ನೋಡಿಕೊಳ್ಳುತ್ತಿದ್ದಳು.

ಸುಬ್ಬುಕೃಷ್ಣ ಹೆಂಡತಿಯ ಮಾತಾಡಿಸುವ ಗೋಜಿಗೇ ಹೋಗಿರಲಿಲ್ಲ.

ಶಾರದಾ ಬೆಂಗಳೂರಿಗೆ ಬಂದು ಮೂರು ವಾರಗಳಾದವು.

ಗಂಡನ ಉಪೇಕ್ಷೆಯ ಅಸಹನೀಯ ವೇದನೆಯನ್ನನುಭವಿಸುತ್ತಾ ಅವಳು ಕಣ್ಣೀರು ಹಾಕುತ್ತಿದ್ದುದನ್ನು ಕಮಲಾಕ್ಷಮ್ಮ, ರತ್ನಾ ಇಬ್ಬರೂ ಗಮನಿಸಿದ್ದರು.

ಒಂದು ದಿನ ರತ್ನಾ,

" ಹೀಗಾದರೆ ಹೇಗೆ ಅತ್ತೆ. ಅಕ್ಕನ ದುಃಖ ನೋಡಲಾಗುತ್ತಿಲ್ಲ."

" ಇದಕ್ಕೆ ಒಂದೇ ಮದ್ದು ರತ್ನಾ—ಇವತ್ತು ಸುಬ್ಬೂ ಬಂದರೆ, ಅವನಿಗೆ ನನ್ನ ಎದುರಿಗೆ ಎಲೆ ಹಾಕಿ ಬಡಿಸು" ಎಂದರು.

ಮಧ್ಯಾನ್ಹ ಮನೆಗೆ ಬಂದ ಸುಬ್ಬುಕೃಷ್ಣ, ಅಡಿಗೆಯ ಮನೆಯಲ್ಲಿ ಎಲೆ ಇಲ್ಲದುದನ್ನು ಕಂಡು,

" ರತ್ನಾ—ನನಗೆ ಎಲೆ ಹಾಕಿ ಬಡಿಸಲ್ಲವೇ ? "

ಎಂದು ಕೇಳಿದ.

" ಅತ್ತೆ ರೂಮಿನಲ್ಲಿ ಎಲೆ ಹಾಕಿದ್ದೇನೆ."

ಸುಬ್ಬುಕೃಷ್ಣ ತಾಯಿಯ ರೂಮಿಗೆ ಬಂದು,

" ಯಾಕಮ್ಮ—ಇಲ್ಲಿ ಎಲೆ ಹಾಕಿಸಿದ್ದೀ? "

" ಕುಳಿತುಕೋ—ಹೇಳ್ತೀನಿ."

ಸುಬ್ಬುಕೃಷ್ಣ ಎಲೆಯ ಮುಂದೆ ಕುಳಿತು,

"ನಿನ್ನ ಊಟ ಆಯಿತೇ?"

"ಇಲ್ಲ."

"ಹೊತ್ತಿಗೆ ಹೊತ್ತಿಗೆ ನೀನು ಏಕಮ್ಮ ಊಟಮಾಡಲ್ಲ!"

"ಈ ಮನೆಯಲ್ಲಿ ಇನ್ನು ಮೇಲೆ ನಾನು ಊಟಮಾಡಲ್ಲ"

"ಅಮ್ಮ....................."

"ನನ್ನ ಮಾತಿಗೆ ಬೆಲೆಯಿಲ್ಲದ ಮೇಲೆ ನಾನೇಕೆ ಇರಬೇಕು?"

"ನಿನ್ನ ಮಾತು ಯಾರು ತೆಗೆದುಹಾಕುತ್ತಾರಮ್ಮ."

"ನೀನು"

"ನಾನೇ!"

"ಹೌದು."

"ಯಾವ ವಿಷಯದಲ್ಲಿ?"

"ಯಾವ ವಿಷಯದಲ್ಲಿ ಎನ್ನುವುದು ನಿನಗೆ ಗೊತ್ತಿದೆ."

"ಅದೇ............ಸರಿ!"

"ನಾನು ಊಟಮಾಡಬೇಕಾದರೆ ನೀನು ನನ್ನ ಮಾತು ಕೇಳಬೇಕು."

ಉಭಯಸಂಕಟಕ್ಕೆ ಸಿಲುಕಿದ್ದ ಸುಬ್ಬುಕೃಷ್ಣ,

"ಹಟಮಾಡಬೇಡಮ್ಮ."

"ನೀನು ಹಟ ಮಾಡಬಹುದೋ?—ಮಾತು ಬಂತು—ಹೋಯಿತು. ಇನ್ನೂ ಆ ಅರಿಯದ ಹುಡುಗಿಯ ಮೇಲೆ ದ್ವೇಷವೇ?"

"ನನಗೆ ಅವಳು ಬೇಕಿಲ್ಲ."

"ಹಾಗಾದರೆ ನನ್ನ ಯೋಗಕ್ಷೇಮ ಕಟ್ಟಿಕೊಂಡು ನಿನಗಾಗ ಬೇಕಾದುದೇನು—ನೋಡು ಸುಬ್ಬು, ಇದುವರೆಗೆ ನಿನ್ನನ್ನು ನಿನ್ನ ದಾರಿಗೇ ಬಿಟ್ಟೆ. ನೀನೇ ತಿಳಿದುಕೊಂಡು ನಿನ್ನ ನಡತೆ ಸರಿಪಡಿಸಿಕೊಳ್ಳುತ್ತಿ ಎಂದು ಭಾವಿಸಿದ್ದೆ. ನಿನಗಿನ್ನೂ ಬುದ್ಧಿ ಬಂದಿಲ್ಲ—ನಾನು ಕಣ್ಣುಮುಚ್ಚಿದ ಮೇಲೇ ನಿನಗೆ ಬುದ್ಧಿ ಬರುತ್ತದೇನೋ—ನೀನು ಶಾರದನನ್ನು ಸರಿಯಾಗಿ ಮಾತಾಡಿಸದಿದ್ದರೆ ನೀನು ಮಗನಲ್ಲ—ನಾನು ತಾಯಿಯಲ್ಲ!"

ಎಂದು ಹೇಳಿ, ಮುಸುಕು ಬೀರಿ ಮಲಗಿಬಿಟ್ಟರು.

ಸುಬ್ಬುಕೃಷ್ಣನ ಕಣ್ಣುಗಳಿಂದ ಧಾರಾಪ್ರವಾಹ ಹೊರಟಿತು.

" ಅಮ್ಮಾ......................... "

ಉತ್ತರವಿಲ್ಲ.

" ಅಮ್ಮಾ........................ "

ಅದಕ್ಕೂ ಉತ್ತರವಿಲ್ಲ.

" ಏಳಮ್ಮಾ—ಊಟಮಾಡು. ತಪ್ಪಾಯಿತು—ನೀನು ಹೇಳಿದ ಹಾಗೆ ಮಾಡುತ್ತೇನೆ—ಏಳಮ್ಮಾ "

ಎಂದು ತಾಯಿಯ ಪಾದಗಳ ಮೇಲೆ ಬಿದ್ದ.

ಕಮಲಾಕ್ಷಮ್ಮನವರು ಎದ್ದು ಕುಳಿತು, ಮಗನ ಕಣ್ಣೀರು ಒರಸಿ,

" ರತ್ನಾ................" ಎಂದರು.

ರತ್ನಾ ಬರಲು,

" ನನಗೂ ಒಂದು ಎಲೆ ತಂದು ಹಾಕು—ನೀನು ಬಡಿಸಬೇಡ. ಶಾರದಾ ಬಡಿಸಲಿ—"

ರತ್ನಾ ನಸುನಗುತ್ತಾ,

" ಆಗಲಿ—ಅತ್ತೆ " ಎಂದಳು.

---

# ನಮ್ಮ ಪ್ರಕಟನೆಗಳು

| | | |
|---|---|---|
| ಪ್ರೇಮಸುಧಾ | .... | ಮ. ನ. ಮೂರ್ತಿ |
| ನಾಟ್ಯ ಮಯೂರಿ | .... | ವೈ. ಸು. ಶೇ. |
| ಪ್ರಣಯ ಕೋಲಾಹಲ | .... | ನಾಡಿಗೇರ ಕೃಷ್ಣರಾಯ |
| ಸತೀ ಸೂಳೆ | .... | ಬೀChi |
| ಸ್ತ್ರೀಮುಖವ್ಯಾಘ್ರ | .... | ಅ. ನ. ಕೃ |
| ಮನೆಗೆ ಬಂದ ಸೊಸೆ | .... | ಸೂರ್ಯನಾರಾಯಣ ಚಡಗ |
| ಸುವರ್ಣ ಮೋಹಿನಿ | .... | ಮ. ಶ್ರೀಧರಮೂರ್ತಿ |
| ತೆರೆಮರೆಯ ಸುಂದರಿಯರು | .... | ನಾಡಿಗೇರ ಕೃಷ್ಣರಾಯ |
| ಸಮರ ಸುಂದರಿ | .... | ಅ. ನ. ಕೃ |
| ಮೋಡಮ್ಮನ ಗಂಡ | .... | ಬೀChi |
| ಆರಾಧಿತೆ | .... | ಮ. ನ. ಮೂರ್ತಿ |
| ಅಮರ ಸರಸ್ವತಿ | .... | ಸೂರ್ಯನಾರಾಯಣ ಚಡಗ |
| ಅಣ್ಣನ ಹೆಂಡತಿ | .... | ಕೃಷ್ಣಮೂರ್ತಿ ಪುರಾಣಿಕ |
| ಶುಭಸ್ವೀಕಾರ | .... | ವೈ. ಸು. ಶೇ. |
| ಮನೆ ತುಂಬಿದ ಮಡದಿ | .... | ಸೂರ್ಯನಾರಾಯಣ ಚಡಗ |
| ನಾಟ್ಯಕಸ್ತೂರಿ | .... | ತ್ರಿವಿಕ್ರಮ |
| ನಾಲ್ಕು ಸುಂದರಿಯರು | .... | ನಾಡಿಗೇರ ಕೃಷ್ಣರಾಯ |

★

ಗೀತಾ ಪಬ್ಲಿಕೇಷನ್ಸ್
ಸೌರಾಷ್ಟ್ರಪೇಟೆ, ಬೆಂಗಳೂರು - 2

ಪ್ರತಿಯೊಂದು ಸಂಸಾರದಲ್ಲಿ ನಿತ್ಯ ನಡೆಯುವ ಮಂಥನದ ಇತಿವೃತ್ತವೇ '**ಅಮೃತಮಂಥನ**'ದ ವಸ್ತು. ನಾಲ್ಕು ಸಂಸಾರಗಳ ಕಥೆಯನ್ನು ಚಿತ್ರಿಸುವ ಈ ಕಾದಂಬರಿಯಲ್ಲಿ ಬೆಳಗುವ ಧ್ರುವತಾರೆ 'ಕಮಲಾಕ್ಷಮ್ಮ'—ಒಡೆದ ಮನೆಯನ್ನು ಕೂಡಿಸಿ, ಒಡೆದ ಮನಸ್ಸನ್ನು ಸರಿಪಡಿಸಿ, ಎಲ್ಲರ ಜೀವನಕ್ಕೂ ಅಮೃತಸೇಚನೆ ಮಾಡಿಸಿದ ಮಹಾತಾಯಿ—ಕಮಲಾಕ್ಷಮ್ಮ.

ಯೋಗಾನರಸಿಂಹ, ಪದ್ಮನಾಭರಾಯರು; ಕಮಲಾಕ್ಷಮ್ಮ, ನಾಗೂಬಾಯಿ; ರತ್ನಾ, ಶಾರದಾ; ಸುಬ್ಬುಕೃಷ್ಣ, ರಾಮಸ್ವಾಮಿ ಇವರ ಮಧುರಸಂಬಂಧದ ಸುಂದರಚಿತ್ರಗಳ ಸಂಪುಟ '**ಅಮೃತಮಂಥನ.**'

ಕರುಣಾರಸಪ್ರತಿಪಾದನೆಯಲ್ಲಿ **ಅ. ನ. ಕೃ** ಅವರು ಗಳಿಸಿರುವ ಸಿದ್ಧಿಯ ಪರಾಕಾಷ್ಠದೆಸೆಯ ದ್ಯೋತಕವಾಗಿ ಈ ಕಾದಂಬರಿ ಇದೆ ಎನ್ನುವ ಮಾತು ಉತ್ಪ್ರೇಕ್ಷೆಯಲ್ಲ.

—**ಪ್ರಕಾಶಕರು**